


# ನಮ್ಮ ಆಸ್ಪತ್ರೆಯತ್ತ....

## ಒಂದು ಸರಳ ಮಾಹಿತಿ ಕೈಪಿಡಿ

civic
BANGALORE
CITIZENS' VOLUNTARY INITIATIVE FOR THE CITY

# ನಮ್ಮ ಆಸ್ಪತ್ರೆಯತ್ತ....

ಸಿದ್ಧಪಡಿಸಿದವರು

**ರಾಮಚಂದ್ರ ಕೆ.ವಿ.**

ಪ್ರಾಜೆಕ್ಟ್ ಕೋ-ಆರ್ಡಿನೇಟರ್

## ಒಂದು ಸರಳ ಮಾಹಿತಿ ಕೈಪಿಡಿ

CIVIC
BANGALORE

ಸಿವಿಕ್ ಬೆಂಗಳೂರು

ನಂ.6, 2ನೇ ಮಹಡಿ, ಕಸ್ತೂರಿ ಅಪಾರ್ಟ್‌ಮೆಂಟ್ಸ್,

35/23 ಲ್ಯಾಂಗ್‌ಫೋರ್ಡ್ ರಸ್ತೆ ಕ್ರಾಸ್, ಶಾಂತಿನಗರ, ಬೆಂಗಳೂರು-560 025

ದೂರವಾಣಿ: 22115084 / 41144126

E-mail: info@civicspace.in Website: www.civicspace.in

# ವಿಷಯ ಸೂಚಿ




ಕಛೇರಿ : 080-2287 4039
080-2235 4085
ಫ್ಯಾಕ್ಸ್ : 080-2228 5591

# ಆಯುಕ್ತಾಲಯ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ಆಯುಷ್ ಸೇವೆಗಳು

ದಿನಾಂಕ: 30/05/2011

## ಒಂದೆರಡು ಮಾತು

ಬೆಂಗಳೂರು ನಗರವು ವಿಶ್ವದಲ್ಲಿಯೇ ಅತಿ ವೇಗವಾಗಿ ಬೆಳೆಯುತ್ತಿರುವ ಮಹಾನಗರಗಳಲ್ಲೊಂದು, ಬೆಂಗಳೂರಿನ ಜನಸಂಖ್ಯೆ ಈಗಾಗಲೇ ಒಂದು ಕೋಟಿಗೆ ಸಮೀಪಿಸುತ್ತಿದೆ. ಇತ್ತೀಚಿನ ದಿನಗಳಲ್ಲಿ, ಜನ ವಸತಿ ಹೆಚ್ಚಿದಂತೆ ನಾಗರಿಕ ಸೌಲಭ್ಯಗಳನ್ನು ಜನ ಸಾಮಾನ್ಯರಿಗೆ ತಲುಪಿಸುವುದು ಅನಿವಾರ್ಯವಾಗಿದೆ.

ನಮ್ಮ ದೇಶದಲ್ಲಿ ಬಡತನ ಸಿರಿತನದ ನಡುವಿನ ಅಂತರ ಮುಂದುವರೆದಿದ್ದು, ಉಳ್ಳವರು ಆಧುನಿಕ ಸೌಲಭ್ಯಗಳಿರುವ ಆಸ್ಪತ್ರೆಗಳಲ್ಲಿ ಸೇವೆ ಪಡೆಯಲು ಸಾಧ್ಯವಾಗಿದೆ. ಆದರೆ ಜನ ಸಾಮಾನ್ಯರು, ಆರ್ಥಿಕವಾಗಿ ಹಿಂದುಳಿದವರು ಕೊಳಗೇರಿಗಳಲ್ಲಿ ವಾಸಿಸುವವರಿಗೆ ಅಂತಹ ಸೌಲಭ್ಯಗಳು ಮರೀಚಿಕೆಯಾಗಿಯೇ ಉಳಿದಿದೆ. ಸರ್ಕಾರವು ಹಲವಾರು ಆರೋಗ್ಯ ಸೌಲಭ್ಯಗಳನ್ನು ಒದಗಿಸಲು ವ್ಯಾಪಕ ಕಾರ್ಯಕ್ರಮಗಳನ್ನು ರೂಪಿಸಿ ಅನುಷ್ಠಾನಗೊಳಿಸುತ್ತಿದ್ದರೂ ಸಹ ಕಾರ್ಯಕ್ರಮಗಳು ಪೂರ್ಣ ಪ್ರಮಾಣದಲ್ಲಿ ಜನಸಾಮಾನ್ಯರನ್ನು ತಲುಪಲಾಗದಿರುವುದಕ್ಕೆ ಜನರಲ್ಲಿ ಮಾಹಿತಿ ಕೊರತೆಯು ಒಂದು ಕಾರಣವಾಗಿದೆ.

ಸರ್ಕಾರವು ಹಲವಾರು ಆರೋಗ್ಯ ಸೌಲಭ್ಯ ಹಾಗೂ ಸೇವೆಗಳನ್ನು ಬಹುದಿನದಿಂದಲೂ ನೀಡುತ್ತಾ ಬಂದಿದೆ. ಒಟ್ಟಾರೆ ಜನ ಸಮುದಾಯದ ಆರೋಗ್ಯದ ಕಾಳಜಿ ಹೊಂದಿರುವ ಆರೋಗ್ಯ ಇಲಾಖೆ ಕೂಡ ಜನಪರ ಯೋಜನೆ, ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದು, ಸಾರ್ವಜನಿಕರು ಇವುಗಳ ಸದುಪಯೋಗ ಪಡೆದುಕೊಳ್ಳಬೇಕಾಗಿದೆ.

ಈ ನಿಟ್ಟಿನಲ್ಲಿ ಸ್ವಯಂ ಸೇವಾ ಸಂಸ್ಥೆಯಾದ **ಸಿವಿಕ್** ಸರ್ಕಾರಿ ಆಸ್ಪತ್ರೆಗಳಲ್ಲಿ ದೊರೆಯುವ ಸೌಲಭ್ಯಗಳನ್ನು ಜನತೆಗೆ ವಿಶೇಷವಾಗಿ ಬಡವರಿಗೆ ಕೊಳೆಗೇರಿವಾಸಿಗಳಿಗೆ ತಿಳಿಹೇಳುವ ಸಲುವಾಗಿ ಮಾಹಿತಿ ಪುಸ್ತಕವೊಂದನ್ನು ಹೊರತರುತ್ತಿರುವುದು ಸ್ವಾಗತಾರ್ಹ.

ಸರ್ಕಾರದ ಹಾಗೂ ಜನತೆಯ ನಡುವೆ ಸೇತುವೆಯಾಗಿ ಕಾರ್ಯನಿರ್ವಹಿಸುತ್ತಿರುವ **ಸಿವಿಕ್** ಜನತೆಯೆಡೆಗೆ ಆರೋಗ್ಯ ಸೌಲಭ್ಯಗಳನ್ನು ಪರಿಣಾಮಕಾರಿಯಾಗಿ ತಲುಪಿಸಲು ಪ್ರಕಟಿಸುತ್ತಿರುವ ಮಾಹಿತಿ ಪುಸ್ತಕದಲ್ಲಿನ ಮಾಹಿತಿಯಂತೆ ಸಾರ್ವಜನಿಕರು ಆರೋಗ್ಯ ಸೇವಾ-ಸೌಲಭ್ಯಗಳನ್ನು ಬಳಸಿಕೊಳ್ಳಲು ಸಾಧ್ಯವಾಗಿ ಎಲ್ಲರಿಗೂ ಉತ್ತಮ ಆರೋಗ್ಯ ಲಭಿಸಲಿ ಎಂದು ಆಶಿಸುತ್ತೇನೆ.

(ಡಿ.ಎನ್. ನಾಯಕ್)
ಆಯುಕ್ತರು
ಆರೋಗ್ಯ ಮತ್ತು ಕುಟುಂಬ ಕಲ್ಯಾಣ
ಸೇವೆಗಳು.

# ಮುನ್ನುಡಿ

"ಎಲ್ಲರಿಗೂ ಆರೋಗ್ಯ, ಎಲ್ಲೆಡೆಯೂ ಆರೋಗ್ಯ"

ಎಂಬುದು ಸರ್ವಕಾಲಕ್ಕೂ ಅನ್ವಯವಾಗುವಂತಹ ಮಾತು. ಪ್ರಸ್ತುತ ಪರಿಸ್ಥಿತಿಯಲ್ಲಿ ಸಮಾಜದ ಪ್ರತಿಯೊಬ್ಬ ವ್ಯಕ್ತಿಯ ಆಶೆಯವೂ ಇದೇ ಆಗಿದೆ. ವಿಶ್ವ ಆರೋಗ್ಯ ಸಂಸ್ಥೆಯ ಮೇಲಿನ ಘೋಷಣೆ ಸಾಕಾರವಾಗ ಬೇಕಾದರೆ, ಎಲ್ಲಾ ಆರೋಗ್ಯ ಕಾರ್ಯಕ್ರಮಗಳು ಮತ್ತು ಸೇವೆಗಳು ಕಟ್ಟಕಡೆಯ ಸಾಮಾನ್ಯ ವ್ಯಕ್ತಿಯನ್ನು ತಲುಪಬೇಕಾದುದು ಅವಶ್ಯಕವಾಗಿದೆ. ಹಾಗಾಗಿ ಆರೋಗ್ಯ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸಿ, ಗುಣಮಟ್ಟದ ಆರೋಗ್ಯ ಸೇವೆಗಳನ್ನು ನಿರಂತರವಾಗಿ, ಸಮಾನವಾಗಿ ದೊರೆಯುವಂತೆ ಮಾಡಲು ಸಮುದಾಯದ ಸಹಭಾಗಿತ್ವ ಅತೀ ಅವಶ್ಯ. ಈ ದಿಸೆಯಲ್ಲಿ ಸಿವಿಕ್ ಬೆಂಗಳೂರು ಸಂಸ್ಥೆಯವರು ಸರ್ಕಾರ ಹಾಗೂ ಪಾಲಿಕೆಯೊಂದಿಗೆ ಕೈಜೋಡಿಸಿ ಆರೋಗ್ಯ ಸೌಲಭ್ಯಗಳ ಮಾಹಿತಿಗಾಗಿ ಈ ಕೈಪಿಡಿಯನ್ನು ಹೊರತರುತ್ತಿರುವುದು ಅತ್ಯಂತ ಶ್ಲಾಘನೀಯ.

ಸಾರ್ವಜನಿಕರಿಗೆ ಎಲ್ಲಾ ಆರೋಗ್ಯ ಸೌಲಭ್ಯಗಳ ಬಗ್ಗೆ ಮಾಹಿತಿ ನೀಡಿ, ಸಮರ್ಪಕವಾಗಿ ಉಪಯೋಗಿಸಿಕೊಳ್ಳಲು ಅರಿವು ಮೂಡಿಸಿ, ಫಲಾನುಭವಿಗಳಿಗೆ ಮಹತ್ತರ ಲಾಭ ಆಗುವಂತೆ ಮಾಡುವುದೇ ಈ ಕೈಪಿಡಿಯ ಪರಮೋದ್ದೇಶ.

ಈ ಕೈಪಿಡಿಯಲ್ಲಿ ಸರ್ಕಾರದ ಹಾಗೂ ಬೃ.ಬೆಂ.ಮ.ಪಾ. ಆರೋಗ್ಯ ಇಲಾಖೆಯಿಂದ ಹಮ್ಮಿಕೊಂಡಿರುವ ಆರೋಗ್ಯ ಸೇವಾ ಯೋಜನೆಗಳು, ಸೌಲಭ್ಯಗಳು ದೊರಕುವ ಸ್ಥಳ, ಆಸ್ಪತ್ರೆಗಳ ದೂರವಾಣಿ ಸಂಖ್ಯೆ ಹಾಗೂ ಕಡು ಬಡವರಿಗೆ ಇರುವ ವಿಶೇಷ ಸೇವಾ ಸೌಲಭ್ಯಗಳ ಬಗ್ಗೆ ಸಂಪೂರ್ಣ ಮಾಹಿತಿ ಲಭ್ಯವಿದೆ.

ಈಗಾಗಲೇ ಬೃ.ಬೆಂ.ಮ.ಪಾ.ವತಿಯಿಂದ ಹಲವಾರು ಆರೋಗ್ಯ, ಶಿಕ್ಷಣ, ಮಾಹಿತಿ ಕಾರ್ಯಕ್ರಮಗಳನ್ನು ಸತತವಾಗಿ ನಡೆಸಲಾಗುತ್ತಿದ್ದು, ವಿವಿಧ ಮಾಧ್ಯಮಗಳ ಮೂಲಕ ಸಾರ್ವಜನಿಕರಿಗೆ ಅಗಿವು ಮೂಡಿಸಲಾಗುತ್ತಿದೆ. "ಆರೋಗ್ಯ ಸಮಾಚಾರ ವಾಹಿನಿ ತ್ರೈಮಾಸಿಕಪತ್ರಿಕೆ"ಯನ್ನು ಪ್ರಕಟಿಸಲಾಗುತ್ತಿದೆ. ಈಗ ಸಿವಿಕ್ ಬೆಂಗಳೂರು ಸಂಸ್ಥೆಯ ವತಿಯಿಂದ ಬಿಡುಗಡೆಯಾಗುತ್ತಿರುವ ಈ ಕೈಪಿಡಿ, "ಜನರ ಆರೋಗ್ಯವನ್ನು ಜನರ ಕೈಯಲ್ಲಿಯೇ ಕೊಡುವಲ್ಲಿ ಒಂದು ಪರಿಣಾಮಕಾರಿಯಾದ ಹೆಜ್ಜೆಯಾಗಿದೆ" ಎಂದು ಸಿವಿಕ್ ಬೆಂಗಳೂರು ಸಂಸ್ಥೆಯವರನ್ನು ಹಾರ್ಧಿಕವಾಗಿ ಅಭಿನಂದಿಸುತ್ತಾ, ಜನತೆ ಇದರ ಸದುಪಯೋಗ ಪಡೆದು ಆರೋಗ್ಯ ಕಾರ್ಯಕ್ರಮಗಳೆಲ್ಲ ಯಶಸ್ವಿಯಾಗಲಿ ಎಂದು ಹಾರೈಸುತ್ತೇನೆ.

**ಡಾ|| ಎಲ್.ಟಿ.ಗಾಯತ್ರಿ**
ಮುಖ್ಯ ಆರೋಗ್ಯಾಧಿಕಾರಿ
ಬೃ.ಬೆಂ.ಮ.ಪಾಲಿಕೆ

# ಪೀಠಿಕೆ

ಆರೋಗ್ಯವಂತ ಪ್ರಜೆಗಳನ್ನು ಹೊಂದಿರುವಂತಹ ದೇಶವು ಎಲ್ಲಾ ರಂಗಗಳಲ್ಲಿಯೂ ಆರೋಗ್ಯವಾಗಿರುತ್ತದೆ. ಆದ್ದರಿಂದ ವಿಶ್ವ ಆರೋಗ್ಯ ಸಂಘಟನೆಯು "ಎಲ್ಲರಿಗೂ ಆರೋಗ್ಯ-ಎಲ್ಲೆಡೆಯೂ ಆರೋಗ್ಯ" ಎಂಬ ಘೋಷವಾಕ್ಯದೊಂದಿಗೆ ವಿಶ್ವದ ಎಲ್ಲಾ ರಾಷ್ಟ್ರಗಳಲ್ಲಿ ಆರೋಗ್ಯದ ಕಾರ್ಯಕ್ರಮಗಳನ್ನು ರೂಪಿಸಿತು, ಈ ಮೂಲಕ ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ಬಡವರ ಆರೋಗ್ಯದ ಕಡೆ ಗಮನ ಹರಿಸಿತು.

ಭಾರತ ಸಂವಿಧಾನದ 21ನೇ ಪರಿಚ್ಛೇದವು ಪ್ರತಿಯೊಬ್ಬ ನಾಗರೀಕನ ಬದುಕುವ ಹಕ್ಕನ್ನು ಕಾಪಾಡುವಂತೆ ಸರ್ಕಾರಕ್ಕೆ ತಾಕೀತು ಮಾಡುತ್ತದೆ. ಹಾಗೆಯೇ 47ನೇ ಪರಿಚ್ಛೇದವು ಪೌಷ್ಟಿಕತೆ ಮತ್ತು ಜೀವನಮಟ್ಟವನ್ನು ಹೆಚ್ಚಿಸುವಲ್ಲಿ ಹಾಗೂ ಸಾರ್ವಜನಿಕ ಆರೋಗ್ಯವನ್ನು ಸುಧಾರಿಸುವುದು ಪ್ರಭುತ್ವದ ಆದ್ಯ ಕರ್ತವ್ಯಗಳಲ್ಲಿ ಒಂದನ್ನಾಗಿ ಪರಿಗಣಿಸತಕ್ಕದ್ದು ಎಂದು ಸ್ಪಷ್ಟಪಡಿಸುತ್ತದೆ.

ಈ ನಿಟ್ಟಿನಲ್ಲಿ ಸರ್ಕಾರವು ಸರ್ಕಾರಿ ಆಸ್ಪತ್ರೆ ಮತ್ತು ಅರೆ ಸರ್ಕಾರಿ ಆಸ್ಪತ್ರೆಗಳ ಮೂಲಕ ವೈದ್ಯಕೀಯ ಸೇವೆಯನ್ನು ಪ್ರಜೆಗಳಿಗೆ ಒದಗಿಸುತ್ತಿದೆ. ಇವು ಉತ್ತಮ ವೈದ್ಯಕೀಯ ಸೇವೆವನ್ನು ಕೊಡುವಲ್ಲಿ ವಿಫಲವಾದರೆ ಅದು ಆ ವ್ಯಕ್ತಿಗೆ 21ನೇ ಪರಿಚ್ಛೇದದಲ್ಲಿ ಒದಗಿಸಲಾಗಿರುವ ಬದುಕುವ ಹಕ್ಕನ್ನು ಉಲ್ಲಂಘಿಸದಂತಾಗುತ್ತದೆ.

ಈ ನಿಟ್ಟಿನಲ್ಲಿ ಭಾರತ ಸರ್ಕಾರವು ತನ್ನ ಪ್ರಜೆಗಳಿಗೆ ಉತ್ತಮ ವೈದ್ಯಕೀಯ ಸೇವೆಯನ್ನು ಒದಗಿಸಿಕೊಡಲು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿದೆ. ಕೇಂದ್ರ ಸರ್ಕಾರವು 2005ರಲ್ಲಿ ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಜಾರಿಗೆ ತಂದು ಇದರ ಮೂಲಕ ಸಮಾಜದ ಕಟ್ಟಕಡೆಯ ವ್ಯಕ್ತಿಯವರೆಗೂ ಉತ್ತಮ ಸೇವೆಯನ್ನು ನೀಡಲು ಯೋಜನೆಗಳನ್ನು ರೂಪಿಸಿದೆ. ಎಲ್ಲಾ ಪ್ರದೇಶಗಳಲ್ಲಿ ಉಪಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ, ಸಮುದಾಯ ಆರೋಗ್ಯ ಕೇಂದ್ರ, ತಾಲ್ಲೂಕು ಆಸ್ಪತ್ರೆ, ಜಿಲ್ಲಾಸ್ಪತ್ರೆ, ಸ್ವಾಯತ್ತ ಆಸ್ಪತ್ರೆಗಳ ಮೂಲಕ ವೈದ್ಯಕೀಯ ಸೇವೆಯನ್ನು ನೀಡುತ್ತಿದೆ. ಹಾಗೂ ನಗರ ಪ್ರದೇಶಗಳಲ್ಲಿ ಸ್ಥಳಿಯ ಸರ್ಕಾರಗಳು ಹೆರಿಗೆ ಆಸ್ಪತ್ರೆ, ರೆಫರಲ್ ಆಸ್ಪತ್ರೆ, ಆರೋಗ್ಯ ಕೇಂದ್ರ ಮತ್ತು ಕುಟುಂಬ ಕಲ್ಯಾಣ ಕೇಂದ್ರಗಳ ಮೂಲಕ ಸಾರ್ವಜನಿಕರಿಗೆ ವೈದ್ಯಕೀಯ ಸೇವೆಯನ್ನು ನೀಡುತ್ತಿದೆ.

ಸರ್ಕಾರವು ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡಿದ್ದರೂ ಸಹ ಕೆಳಮಟ್ಟದ ಸಮುದಾಯಕ್ಕೆ ಈ ಸೌಲಭ್ಯಗಳು ಸಿಗದೇಇರುವುದು ದುರಾದೃಷ್ಟಕರ ಸಂಗತಿಯಾಗಿದೆ. ಬೆಂಗಳೂರಿನ ಹಲವಾರು ಕೊಳಗೇರಿಗಳಲ್ಲಿ ಒಂದು ಸಲವೂ ಗರ್ಭಿಣಿ ತಪಾಸಣೆ ಮಾಡಿಸದಂತಹ ಮಹಿಳೆಯರಿದ್ದಾರೆ. ಸರ್ಕಾರಿ ಸೌಲಭ್ಯಗಳ ಬಗ್ಗೆ ಅರಿವು ಇಲ್ಲದಂತಹ ಜನ ಇದ್ದಾರೆ. ಅಧಿಕಾರಿಗಳ ನಿರ್ಲಕ್ಷ್ಯದಿಂದಾಗಿ ಜನ ಸರ್ಕಾರಿ ಆಸ್ಪತ್ರೆಗಳಲ್ಲಿನ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವಲ್ಲಿ ವಿಫಲವಾಗುತ್ತಿದ್ದಾರೆ, ನಾಯಿಕೊಡೆಗಳಂತೆ ತಲೆ ಎತ್ತುತ್ತಿರುವ ಖಾಸಗೀ ಆಸ್ಪತ್ರೆಗಳ ಮೇಲಿನ ಅವಲಂಬನೆ ಹೆಚ್ಚಾಗುತ್ತಿದೆ, ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಆರೋಗ್ಯವನ್ನು ದುಡ್ಡು ಕೊಟ್ಟು ಕೊಂಡುಕೊಳ್ಳುವ ಪರಿಸ್ಥಿತಿ ಅನಿವಾರ್ಯವಾಗುತ್ತಿದೆ. ಬಡವರು ಆರೋಗ್ಯಕ್ಕಾಗಿ ಪರದಾಡುವ ಸ್ಥಿತಿ ಉಂಟಾಗುತ್ತಿದೆ, ಆದ್ದರಿಂದ ಸಾರ್ವಜನಿಕರು ಎಚ್ಚೆತ್ತುಕೊಂಡು ಇದರ ಬಗ್ಗೆ ಗಮನ ಹರಿಸಬೇಕಾಗಿದೆ, ಸರ್ಕಾರಿ ಆಸ್ಪತ್ರೆಗಳನ್ನು ಸಶಕ್ತವಾಗಿಸಬೇಕಾಗಿದೆ.

ಈ ನಿಟ್ಟಿನಲ್ಲಿ ಸಿವಿಕ್ ಸಂಸ್ಥೆಯು ವಿವಿಧ ಆರೋಗ್ಯ ಕೇಂದ್ರಗಳು ಮತ್ತು ಆಸ್ಪತ್ರೆಗಳಲ್ಲಿ ದೊರಕುವ ಸೌಲಭ್ಯಗಳ ಮಾಹಿತಿಯನ್ನು ಕ್ರೋಢೀಕರಿಸಿ ಈ ಕಿರು ಹೊತ್ತಿಗೆಯನ್ನು ಜನರ ಅನುಕೂಲಕ್ಕಾಗಿ ಹೊರತರುತ್ತಿದೆ.

# 1) ಆರೋಗ್ಯ ಸೇವೆ ವ್ಯವಸ್ಥೆ:-

ಕರ್ನಾಟಕ ಸರ್ಕಾರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯು "ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ"ದಡಿ ಹಲವಾರು ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುತ್ತಿದೆ. ಈ ಎಲ್ಲಾ ಕಾರ್ಯಕ್ರಮಗಳನ್ನು ಉಪಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ, ಸಾರ್ವಜನಿಕ ಆಸ್ಪತ್ರೆ, ನಗರ ಕುಟುಂಬ ಕಲ್ಯಾಣ ಕೇಂದ್ರ, ಹೆರಿಗೆ ಆಸ್ಪತ್ರೆ ಮತ್ತು ಇತರ ಸಾರ್ವಜನಿಕ ಆರೋಗ್ಯ ಕೇಂದ್ರಗಳ ಮೂಲಕ ಜನರಿಗೆ ತಲುಪಿಸಲಾಗುತ್ತಿದೆ.

**ಬೆಂಗಳೂರಿನಲ್ಲಿ ಸರ್ಕಾರಿ ಆರೋಗ್ಯ ಇಲಾಖೆಯ ವ್ಯವಸ್ಥೆಗಳು:**



## A) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಿಂದ ನೀಡಲ್ಪಡುತ್ತಿರುವ ಸೇವೆಗಳು:-

### i) ಸೇವೆಗಳು

**1) ಉಪಕೇಂದ್ರ:** ಗುಡ್ಡಗಾಡು ಪ್ರದೇಶದಲ್ಲಿ 3000 ಜನಸಂಖ್ಯೆಗೆ ಹಾಗೂ ಸಮತಟ್ಟಾದ ಪ್ರದೇಶದಲ್ಲಿ 5000 ಜನಸಂಖ್ಯೆಗೆ ಒಂದು ಉಪಕೇಂದ್ರ ಇರಬೇಕು. (Indian public health standards ನ ಪ್ರಕಾರ)

**ಉಪಕೇಂದ್ರದಲ್ಲಿನ ಸಿಬ್ಬಂದಿಯ ವಿವರ (IPHS ನ ಪ್ರಕಾರ)**

| ಸಿಬ್ಬಂದಿ | ಕಡ್ಡಾಯ | ಅಪೇಕ್ಷಣೀಯ |
|---|---|---|
| ಆರೋಗ್ಯ ಕಾರ್ಯಕರ್ತೆ(ಮಹಿಳೆ) (ANM) | 1 | +1 |
| ಆರೋಗ್ಯ ಕಾರ್ಯಕರ್ತ(ಪುರುಷ) | 1 | |
| ಕರ್ಮಚಾರಿ (ಗುತ್ತಿಗೆ ಆಧಾರದಲ್ಲಿ) | | 1 |



ಉಪಕೇಂದ್ರವು ತನ್ನದೇ ಆದ ಸ್ವಂತ ಕಟ್ಟಡವನ್ನು ಹೊಂದಿರಬೇಕು, ಸ್ವಂತ ಕಟ್ಟಡ ಇಲ್ಲದಿದ್ದಲ್ಲಿ ಜನರು ಸುಲಭವಾಗಿ ತಲುಪಬಹುದಾದಂತಹ ಸ್ಥಳದಲ್ಲಿ ಕಟ್ಟಡವನ್ನು ಬಾಡಿಗೆಗೆ ಪಡೆದು ನಡೆಸುವುದು.

**ಉಪಕೇಂದ್ರದಲ್ಲಿನ ಸೇವೆಗಳು**

1. ಮಕ್ಕಳಿಗೆ ರೋಗ ನಿರೋಧಕ ಲಸಿಕೆ ನೀಡಿಕೆ.
2. ಇರುಳುಗಣ್ಣಿನ ವಿರುದ್ಧ ವಿಟಮಿನ್ "ಎ" ದ್ರಾವಣವನ್ನು ಪೂರೈಸುವುದು.
3. ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರ ಬಳಿ ಕೆಲವೊಂದು ತುರ್ತು ಔಷಧಿಗಳು ಕೂಡ ಲಭ್ಯವಿರುತ್ತದೆ.
4. ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ಸಾಮಾನ್ಯ ಹೆರಿಗೆಗಳನ್ನು ನಿರ್ವಹಿಸಲು ತರಬೇತಿ ನೀಡಲಾಗಿದೆ.

5. ಮಹಿಳೆಯರು ಗರ್ಭಿಣಿಯಾದ ತಕ್ಷಣವೇ ಅವರ ರಕ್ತದೊತ್ತಡ, ರಕ್ತ, ಮೂತ್ರ ಮತ್ತು ಇನ್ನಿತರ ವೈದ್ಯಕೀಯ ಪರೀಕ್ಷೆಗಳನ್ನು ಸರ್ಕಾರದ ವತಿಯಿಂದ ಉಚಿತವಾಗಿ ಮಾಡಲಾಗುತ್ತದೆ.

6. ಗರ್ಭಿಣಿಯರಿಗೆ ಪ್ರಸವ ಪೂರ್ವ ಪರೀಕ್ಷೆ, ಧನುರ್ವಾಯು ಚುಚ್ಚುಮದ್ದು ಹಾಗೂ ಕಬ್ಬಿಣಾಂಶದ ಮಾತ್ರೆಗಳನ್ನು ನೀಡುವುದರ ಜೊತೆಗೆ ಆರೋಗ್ಯ ಶಿಕ್ಷಣ ನೀಡಲಾಗುವುದು.

7. ಗರ್ಭಿಣಿಯರಿಗೆ ಕನಿಷ್ಠ 3 ಬಾರಿ ಪ್ರಸವ ಪೂರ್ವ ಪರೀಕ್ಷೆ ಮಾಡಿಸಿಕೊಳ್ಳುವ ಸೌಲಭ್ಯ ಒದಗಿಸಲಾಗಿದೆ.

8. ಉಪಕೇಂದ್ರಗಳಲ್ಲಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ವರ್ಷಕ್ಕೆ ಒಟ್ಟು ರೂ.6,000/– ಮೌಲ್ಯದ ಔಷಧಿಗಳನ್ನು ನೀಡಲಾಗುತ್ತದೆ.

9. ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ತುರ್ತು ಸೇವೆಗಾಗಿ ರೂ.10,000/–(ರೂಪಾಯಿ ಹತ್ತು ಸಾವಿರ) ಹಣವನ್ನು ಮುಕ್ತ ನಿಧಿಯಾಗಿ ಕಾಯ್ದಿರಿಸಲಾಗಿದೆ.

10. ಗರ್ಭಿಣಿಯರಿಗೆ ಆಸ್ಪತ್ರೆಯಲ್ಲಿಯೇ ಹೆರಿಗೆ ಮಾಡಿಸಿಕೊಳ್ಳಲು ಅನುಕೂಲ ವಾಗುವಂತೆ ವಾಹನ ಸೌಲಭ್ಯಕ್ಕಾಗಿ ರೂ.200/–ನ್ನು ನಿಗದಿಪಡಿಸಿದ್ದು, ಇದನ್ನು ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯು ಭರಿಸಲು ಸೌಲಭ್ಯವಿದೆ.

**2) ಪ್ರಾಥಮಿಕ ಆರೋಗ್ಯ ಕೇಂದ್ರ:–**

ಗುಡ್ಡಗಾಡು ಪ್ರದೇಶದಲ್ಲಿ 20,000 ಜನಸಂಖ್ಯೆ ಹಾಗೂ ಸಮತಟ್ಟಾದ ಪ್ರದೇಶದಲ್ಲಿ 30,000 ಜನಸಂಖ್ಯೆಗೆ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ ಇರಬೇಕು.



## ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿನ ಸಿಬ್ಬಂದಿಯ ವಿವರ:- (IPHS ನ ಪ್ರಕಾರ)

| ಸಿಬ್ಬಂದಿ | ಕಡ್ಡಾಯ | ಅಪೇಕ್ಷಣೀಯ | ಅಪೇಕ್ಷಣೀಯ |
|---|---|---|---|
| | | 24 ಗಂಟೆ ನರ್ಸಿಂಗ್ ಸೌಲಭ್ಯ | ಜೊತೆಗೆ 24x7 ತುರ್ತು ಚಿಕಿತ್ಸಾ ಸೌಲಭ್ಯವನ್ನು ಹೊಂದಿರತಕ್ಕದ್ದು. |
| ವೈದ್ಯಾಧಿಕಾರಿಗಳು | 2 | 2 | |
| ಆಯುಷ್ ಪ್ರಾಕ್ಟಿಷನರ್ | | 1 ಆಯುಷ್ ಅಥವಾ ಇನ್ನಿತರ ಸ್ಥಳೀಯ ವೈದ್ಯಕೀಯ ಪದ್ಧತಿ ಅನುಸರಿಸುವ ವೈದ್ಯ. | |
| ಅಕೌಂಟ್ ಮ್ಯಾನೇಜರ್ | | 1 | |
| ಫಾರ್ಮಸಿಸ್ಟ್ | 1 | 2 | |
| ದಾದಿ | 1 | 5 | |
| ಆರೋಗ್ಯ ಕಾರ್ಯಕರ್ತೆ | | | |
| | 1 | 1 | |
| ಆರೋಗ್ಯ ಸಹಾಯಕ (ಮಹಿಳೆ) | 1 | 2 (3ಉಪ ಕೇಂದ್ರಗಳಿಗೆ ಒಬ್ಬರಂತೆ) | |
| ಸಹಾಯಕ ಕಣ್ಣು ಪರೀಕ್ಷಕ | 1 | | |
| ಸಮುದಾಯ ಆಧಾರಿತ ಪುನರ್ವಸತಿ ಕಾರ್ಯಕರ್ತ | | 1 | |
| ಗುಮಾಸ್ತ | 2 | 2 | |
| ಮಾಹಿತಿ ನಿರ್ವಾಹಕ | 1 | | |
| ಲ್ಯಾಬೊರೇಟರಿ ಟೆಕ್ನಿಶಿಯನ್ | 1 | 2 | |
| ಚಾಲಕ | 1 | ಐಚ್ಛಿಕ/ ವಾಹನವನ್ನು ಬಾಡಿಗೆಗೆ ಪಡೆಯಬಹುದು. | |
| ಲಸಿಕೆಯನ್ನು ಶೀತಪಾತ್ರೆಗಳಲ್ಲಿ ಸಾಗಿಸಲು ಸಹಾಯಕ | | 1 | |
| ಡಿ ದರ್ಜೆ ನೌಕರರು | 4 | 4* | |
| **ಒಟ್ಟು** | **17** | **25** | |

**ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿನ ಸೇವೆಗಳು:-**

1. ಸರ್ವೇ ಸಾಮಾನ್ಯವಾಗಿ ಎಲ್ಲಾ ಕಾಯಿಲೆಗಳಿಗೆ ಪರೀಕ್ಷೆ ಮಾಡಿ ಚಿಕಿತ್ಸೆ ನೀಡಲಾಗುತ್ತದೆ.
2. ಕಫ, ರಕ್ತ, ಮೂತ್ರ ಪರೀಕ್ಷೆಗಾಗಿ ಪ್ರಯೋಗಾಲಯ ಲಭ್ಯವಿರುತ್ತದೆ.
3. ಗರ್ಭಿಣಿಯರಿಗೆ ಹಾಗೂ ಮಕ್ಕಳಿಗೆ ರೋಗ ಪ್ರತಿಬಂಧಕ ಚುಚ್ಚಮದ್ದನ್ನು ನೀಡಲಾಗುತ್ತದೆ.
4. ಪ್ರತಿ ವರ್ಷ ಪ್ರತಿಯೊಂದು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕೆ ಒಂದು ಲಕ್ಷ ರೂಪಾಯಿ ಮೌಲ್ಯದ ಔಷಧಿ ನೀಡಲಾಗುತ್ತದೆ. ಅದರಲ್ಲಿ 66.54% ರಷ್ಟು ಔಷಧಿಗಳನ್ನು ಸರ್ಕಾರಿ ಔಷಧಿ ಮಳಿಗೆಯಿಂದ ಹಾಗೂ 33.46% ರಷ್ಟು ಜಿಲ್ಲಾ ಪಂಚಾಯತ್ ವತಿಯಿಂದ ಖರೀದಿಸಿ ಸರಬರಾಜು ಮಾಡಲಾಗುತ್ತಿದೆ.

**3) ಸಮುದಾಯ ಆರೋಗ್ಯ ಕೇಂದ್ರ :-**

1. ಇದು ಪ್ರಾಥಮಿಕ ಆರೋಗ್ಯ ಕೇಂದ್ರಕ್ಕಿಂತ ಮೇಲ್ಮಟ್ಟದ್ದಾಗಿದೆ.
2. ನಾಲ್ಕು ತಜ್ಞ ವೈದ್ಯರ ಸೇವೆ ಲಭ್ಯವಿರಬೇಕು
3. 30ರಿಂದ 50 ಹಾಸಿಗೆಗಳ ಸೌಲಭ್ಯವಿರಬೇಕು.
4. ಎಕ್ಸ್-ರೇ ಸೌಲಭ್ಯವಿರಬೇಕು

**4) ತಾಲ್ಲೂಕು ಆಸ್ಪತ್ರೆ:-**

1. ತಾಲ್ಲೂಕು ಆಸ್ಪತ್ರೆಗಳಲ್ಲಿ 100 ಹಾಸಿಗೆಗಳ ಸೌಲಭ್ಯ.
2. ಕಫ, ರಕ್ತ, ಮೂತ್ರ ಪರೀಕ್ಷೆಗಾಗಿ ಪ್ರಯೋಗಾಲಯ ಹಾಗೂ ಎಕ್ಸ್-ರೇ ಸೌಲಭ್ಯ
3. ಚಿಕ್ಕ ಪುಟ್ಟ ಗಾಯಗಳಿಗೆ ಹಾಗೂ ಲಘು ಶಸ್ತ್ರ ಚಿಕಿತ್ಸೆ ಸೌಲಭ್ಯ.
4. ಪುರುಷ ಮತ್ತು ಮಹಿಳೆ ಇಬ್ಬರಿಗೂ ಕುಟುಂಬ ಕಲ್ಯಾಣ ಶಸ್ತ್ರ ಚಿಕಿತ್ಸೆ ಸೌಲಭ್ಯ
5. ಗರ್ಭಿಣಿಯರಿಗೆ ಹಾಗೂ ಮಕ್ಕಳಿಗೆ ರೋಗ ಪ್ರತಿಬಂಧಕ ಚುಚ್ಚುಮದ್ದು.
6. 24 ಗಂಟೆಗಳ ಆರೋಗ್ಯ ಸೇವೆ ಮತ್ತು ತುರ್ತು ಚಿಕಿತ್ಸೆಗಾಗಿ ಮೇಲ್ಮಟದ ಆಸ್ಪತ್ರೆಗೆ ಹೋಗಲು ಅಂಬ್ಯುಲೆನ್ಸ್ ವ್ಯವಸ್ಥೆ.

**5) ಜಿಲ್ಲಾ ಆಸ್ಪತ್ರೆ:-**

1. ತಾಲ್ಲೂಕು ಆಸ್ಪತ್ರೆ /ಸಮುದಾಯ ಆರೋಗ್ಯ ಕೇಂದ್ರಕ್ಕಿಂತ ಮೇಲ್ಮಟ್ಟದ್ದಾಗಿದೆ.
2. 450 ಹಾಸಿಗೆಗಳ ಸೌಲಭ್ಯ
3. ಎಕ್ಸ್-ರೇ ಸೌಲಭ್ಯ ಹಾಗೂ ಎಲ್ಲಾ ತರಹದ ಪರೀಕ್ಷೆಗಾಗಿ ಪ್ರಯೋಗಾಲಯ ಸೌಲಭ್ಯ
4. ಅಂಬ್ಯುಲೆನ್ಸ್ ವ್ಯವಸ್ಥೆ
5. ಆಸ್ಪತ್ರೆಯಲ್ಲಿ ಎಲ್ಲಾ ತಜ್ಞ ವೈದ್ಯರ ಸೇವೆ ಸೌಲಭ್ಯ
6. ಎಲ್ಲಾ ಜಿಲ್ಲಾ ಆಸ್ಪತ್ರೆಗಳು ಯಶಸ್ವಿನಿ ಸಂಪರ್ಕ ಆಸ್ಪತ್ರೆಗಳಾಗಿರುತ್ತವೆ. ಯಶಸ್ವಿನಿ ಕಾರ್ಡ ಹೊಂದಿರುವವರು ಯಶಸ್ವಿನಿ ಪ್ರಯೋಜನಗಳನ್ನು ಜಿಲ್ಲಾ ಆಸ್ಪತ್ರೆಗಳಲ್ಲಿ ಪಡೆಯಬಹುದಾಗಿದೆ.

**6) 24x7 ಪ್ರಾಥಮಿಕ ಆರೋಗ್ಯ ಕೇಂದ್ರಗಳು:-**

1. ವಾರದ ಎಲ್ಲಾ ದಿನಗಳಲ್ಲಿ 24 ಗಂಟೆಗಳ ಕಾಲ ನಿರಂತರ ಸೌಲಭ್ಯ
2. 3 ಶುಶ್ರೂಷಕಿಯರು 8 ಗಂಟೆಗೆ ಒಬ್ಬರಂತೆ ದಿನದ 24 ಗಂಟೆಗಳ ಕಾಲ ನಿರಂತರ ಕರ್ತವ್ಯ ನಿರ್ವಹಣೆ.
3. ಸಾಮಾನ್ಯ ಖಾಯಿಲೆಗಳ (ಕಫ, ರಕ್ತ, ಮೂತ್ರ) ಪರೀಕ್ಷೆಗಾಗಿ ಪ್ರಯೋಗಾಲಯ ಸೌಲಭ್ಯ
4. ಗರ್ಭಿಣಿಯರಿಗೆ ವಿವಿಧ ಪರೀಕ್ಷೆ.
5. ಗಂಡಾಂತರದ ಗರ್ಭಿಣಿಯರನ್ನು ಹೆರಿಗೆಗೆ ಅಂಬ್ಯುಲೆನ್ಸ್ ಅಥವಾ ಮುಕ್ತನಿಧಿ ಅಥವಾ ಬಾಡಿಗೆ ವಾಹನದ ಮುಖಾಂತರ ಎಫ್.ಆರ್.ಯು.ಗಳಿಗೆ ಸಾಗಿಸುವ ವ್ಯವಸ್ಥೆ. (ಮೇಲ್ದರ್ಜೆಗೇರಿಸಿದ ತಾಲ್ಲೂಕು ಆಸ್ಪತ್ರೆ /ಸಮುದಾಯ ಆರೋಗ್ಯ ಕೇಂದ್ರ)

## ii) ಆರೋಗ್ಯ ರಕ್ಷಾ ಸಮಿತಿ

**ಪರಿಚಯ:**

ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನದಡಿಯಲ್ಲಿ ಸಮುದಾಯ ಭಾಗವಹಿಸುವಿಕೆಗೆ ವೇದಿಕೆಯಾಗಿ ಆರೋಗ್ಯ ರಕ್ಷಾಸಮಿತಿಯನ್ನು ಪ್ರಾಥಮಿಕ ಆರೋಗ್ಯ ಕೇಂದ್ರ, ಸಮುದಾಯ ಆರೋಗ್ಯ ಕೇಂದ್ರ, ತಾಲ್ಲೂಕು ಆಸ್ಪತ್ರೆ ಮತ್ತು ಜಿಲ್ಲಾ ಆಸ್ಪತ್ರೆಗಳಲ್ಲಿ ರಚಿಸಬೇಕು. ಸರ್ಕಾರಿ ಸಂಸ್ಥೆಗಳಿಂದ ದೊರೆಯುವ ಸೇವೆಯ ಗುಣಮಟ್ಟದ ಬಗ್ಗೆ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯವನ್ನು ನೀಡಿ ಸೇವೆಯನ್ನು ಉತ್ತಮಪಡಿಸುವ ನಿಟ್ಟಿನಲ್ಲಿ ಈ ಸಮಿತಿ ಕಾರ್ಯನಿರ್ವಹಿಸುತ್ತದೆ.

**ಉದ್ದೇಶ:**



ಆಸ್ಪತ್ರೆಗಳಿಗೆ ಸೇವೆಯನ್ನರಸಿ ಬರುವ ರೋಗಿಗಳ ಸೌಕರ್ಯಕ್ಕಾಗಿ ಏನೆಲ್ಲ ವೈದ್ಯಕೀಯ ಸೌಲಭ್ಯಗಳ ಅವಶ್ಯಕತೆ ಇದೆಯೋ ಅವುಗಳನ್ನು ಸರ್ಕಾರದ ಅನುದಾನ, ಬಳಕೆದಾರರ ಶುಲ್ಕ, ಸ್ಥಳೀಯ ದಾನಿಗಳಿಂದ ಸೇವೆ/ವಂತಿಕೆ ಮತ್ತಿತರ ಮೂಲಗಳಿಂದ ಬರುವ ಸಂಪನ್ಮೂಲದಿಂದ ಭರಿಸಬಹುದಾಗಿರುತ್ತದೆ. ಒಟ್ಟಾರೆ ಸಾರ್ವಜನಿಕ ಆಸ್ಪತ್ರೆ ಮತ್ತು ಸಮುದಾಯ ಆರೋಗ್ಯ ಕೇಂದ್ರಗಳಿಂದ ಗುಣಾತ್ಮಕ ಮತ್ತು ಪರಿಣಾಮಕಾರಿ ಮತ್ತು ಸೇವೆಯನ್ನು ದೊರೆಯುವಂತೆ ಆರೋಗ್ಯ ರಕ್ಷಾ ಸಮಿತಿಯು ಕ್ರಮ ಕೈಗೊಳ್ಳಬೇಕು. ವಿಶೇಷವಾಗಿ ನಗರ ಪ್ರದೇಶದಲ್ಲಿ ವಾಸಿಸುವ ಆರ್ಥಿಕವಾಗಿ ಹಿಂದುಳಿದಿರುವ ಮತ್ತು ವೈದ್ಯಕೀಯ ಸೌಲಭ್ಯದಿಂದ ವಂಚಿತರಾಗಿರುವ ಜನರಿಗೆ ಆದ್ಯತಾಸೇವೆ ನೀಡಲು ಆರೋಗ್ಯ ರಕ್ಷಾ ಸಮಿತಿಯು ಕ್ರಮ ಕೈಗೊಳ್ಳಬೇಕು

1. ರೋಗಿಗಳಿಗೆ ಗುಣಾತ್ಮಕ ಸೇವೆ ದೊರಕಿಸುವುದು.
2. ಬಡ ಮತ್ತು ಆರೋಗ್ಯ ಸೌಲಭ್ಯ ವಂಚಿತ ಜನಸಮುದಾಯಕ್ಕೆ ಆದ್ಯತಾ ಸೇವೆ ಕಲ್ಪಿಸುವುದು.

3. ತಾಯಿ ಮತ್ತು ಮಕ್ಕಳ ಆರೋಗ್ಯ ಸೇವೆ ಸುಧಾರಣೆಯನ್ನು ಪ್ರಮುಖವಾಗಿ-ರಿಸಿಕೊಂಡು ಉಪಕರಣ ಮತ್ತು ವಸ್ತುಗಳ ಖರೀದಿ, ದುರಸ್ತಿ ಮುಂತಾದ ಕ್ರಮ ಕೈಗೊಳ್ಳುವುದು.
4. ಶಸ್ತ್ರಚಿಕಿತ್ಸೆ ಮತ್ತು ಹೆರಿಗೆಯ ವಿಭಾಗಕ್ಕೆ ಅವಶ್ಯವಿರುವ ದುರಸ್ತಿ, ಉನ್ನತೀ-ಕರಣ ಮುಂತಾದ ಕ್ರಮ ಕೈಗೊಳ್ಳುವುದು,
5. ಸೇವಾ ಸೌಲಭ್ಯಗಳನ್ನು ಸುಧಾರಿಸಲು ಆರೋಗ್ಯ ರಕ್ಷಾ ಸಮಿತಿಯು ಚರ್ಚಿಸಿ ಕ್ರಮಗಳನ್ನು ಕೈಗೊಳ್ಳುವುದು.

**ಸದಸ್ಯರು**

"ಆರೋಗ್ಯ ರಕ್ಷಾ ಸಮಿತಿ"ಯು ತಂತ್ರಜ್ಞರು, ವೃತ್ತಿಪರರು, ಅಧಿಕಾರಿಗಳು ಮತ್ತು ಸ್ಥಳೀಯ ನಾಗರೀಕರನ್ನೊಳಗೊಂಡ ನೋಂದಣಿಯಾದ ಸರಳ ಸಂಘಟನೆಯಾಗಿರಬೇಕು.

**ಆರೋಗ್ಯ ರಕ್ಷಾ ಸಮಿತಿಗೆ ಸಂಬಂದಿಸಿದಂತೆ ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆಗಳು:**

ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಜಿಲ್ಲಾ ಮಟ್ಟದ ಆಸ್ಪತ್ರೆಗಳಲ್ಲಿ ಆರೋಗ್ಯ ರಕ್ಷಾ ಸಮಿತಿಗಳನ್ನು ಪುನರ್ ರಚಿಸಲು .

- ಸರ್ಕಾರಿ ಆದೇಶದ ಸಂಖ್ಯೆ: ಆಕುಕ 320 ಸಿಜಿಇ 2006, ಬೆಂಗಳೂರು, ದಿ: 24-1-2007.
- ರಾಜ್ಯದ ಎಲ್ಲಾ ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಆರೋಗ್ಯ ರಕ್ಷಾ ಸಮಿತಿಗಳನ್ನು ಪುನರ್ ರಚಿಸಲು
- ಸರ್ಕಾರಿ ಆದೇಶದ ಸಂಖ್ಯೆ: ಆಕುಕ 319 ಸಿಜಿಇ 2006, ಬೆಂಗಳೂರು, ದಿ: 18-1-2007.
- ಪ್ರಾಥಮಿಕ ಆರೋಗ್ಯ ಕೇಂದ್ರಗಳ ಸಲಹಾ ಸಮಿತಿಗಳ/ಆರೋಗ್ಯ ಸಲಹಾತ್ಮಕ ಸಮಿತಿಗಳನ್ನು ಮಾರ್ಪಡಿಸಿ ಪುನರ್ ರಚಿಸುವ ಬಗ್ಗೆ.
- ಸರ್ಕಾರಿ ಆದೇಶದ ಸಂಖ್ಯೆ: ಆಕುಕ 127 ಸಿಜಿಇ 2007, ಬೆಂಗಳೂರು, ದಿ: 12-7-2007.

**ಚಟುವಟಿಕೆ ಮತ್ತು ಪ್ರಕಾರ್ಯಗಳು:**

ಮೇಲ್ಕಂಡ ಉದ್ದೇಶಗಳನ್ನು ಈಡೇರಿಸುವಲ್ಲಿ ಆರೋಗ್ಯ ರಕ್ಷಾ ಸಮಿತಿಯು ತನ್ನ ಸಂಪನ್ಮೂಲವನ್ನು ಈ ಕೆಳಕಂಡಂತೆ ಬಳಸಬಹುದಾಗಿದೆ.

1. ಸೇವೆಯನ್ನರಸಿ ಆಸ್ಪತ್ರೆಗಳಿಗೆ ಬರುವ ರೋಗಿಗಳಿಗೆ ಇರುವ ತೊಂದರೆಯನ್ನು ಗುರುತಿಸುವುದು.
2. ರೋಗಿಗಳಿಗೆ ಅಗತ್ಯವಿರುವ ಉಪಕರಣಗಳು, ಚಿಕಿತ್ಸಾ ವಸ್ತುಗಳು, ಕ್ರಿಮಿನಾಶಕಗಳು,
3. ತುರ್ತುಕಾರ್ಯಕ್ಕೆ ಬೇಕಾಗುವ ಔಷಧಿಗಳು, ಸುರಕ್ಷತಾ ಕಿಟ್‌ಗಳು ಮತ್ತು ಸಲಕರಣೆಗಳನ್ನು ಖರೀದಿಸುವುದು. ತುರ್ತು ಚಿಕಿತ್ಸಾ ವಾಹನವನ್ನು ದುರಸ್ತಿಪಡಿಸುವುದು.
4. ಅವಶ್ಯವಿದ್ದಾಗ ತುರ್ತು ಚಿಕಿತ್ಸಾ ವಾಹನವನ್ನು ಬಾಡಿಗೆ ಮೇಲೆ ಪಡೆಯುವುದು.
5. ಸರ್ಕಾರದ ಮಾರ್ಗಸೂಚಿಗನುಗುಣವಾಗಿ ಆಸ್ಪತ್ರೆಯ ಕಟ್ಟಡವನ್ನು ವಿಸ್ತರಿಸಿ ಅಭಿವೃದ್ಧಿ ಪಡಿಸುವುದು.
6. ವಾಹನ ಮತ್ತು ಯಂತ್ರೋಪಕರಣಗಳ ನಿರ್ವಹಣೆ.
7. ರೋಗಿಗಳ ಸೌಲಭ್ಯಕ್ಕಾಗಿ ನೀರು, ವೈದ್ಯರ ನಿರೀಕ್ಷಣೆಯಲ್ಲಿರುವವರಿಗೆ ಆಸನದ ವ್ಯವಸ್ಥೆ, ಪ್ರಯೋಗಾಲಯಕ್ಕೆ ಅಗತ್ಯವಿರುವ ಉಪಕರಣಗಳನ್ನು ಖರೀದಿ ಮಾಡುವುದು.
8. ಹೊರ ಮತ್ತು ಒಳರೋಗಿಗಳ ಮನರಂಜನೆಗಾಗಿ ಮತ್ತು ಆರೋಗ್ಯ ಶಿಕ್ಷಣಕ್ಕಾಗಿ ಟಿ.ವಿ, ರೇಡಿಯೋ ಮುಂತಾದ ಮಾಧ್ಯಮಗಳನ್ನು ಅಳವಡಿಸುವುದು.
9. ಕ್ರಿಮಿನಾಶಕಗಳು, ಬ್ಲೀಚಿಂಗ್ ಪೌಡರ್ ಇತ್ಯಾದಿ ಹರಿಗೆ ನಂತರ ಸ್ವಚ್ಛತೆಗೆ ಅವಶ್ಯಕವಿರುವ ಸಿಂಪಡಣೆಗಳನ್ನು ಕೊಂಡುಕೊಳ್ಳುವುದು.
10. ಆಸ್ಪತ್ರೆಯ ತ್ಯಾಜ್ಯವಸ್ತುಗಳ ವಿಲೇವಾರಿ ಬಗ್ಗೆ ಕ್ರಮ ಕೈಗೊಳ್ಳುವುದು.
11. ತುರ್ತು ಸಂದರ್ಭದಲ್ಲಿ ಬಡ ರೋಗಿಗಳನ್ನು ಮೇಲ್ದರ್ಜೆ ಆಸ್ಪತ್ರೆಗೆ ರವಾನಿಸಲು ವಾಹನ/ಇಂಧನದ ವ್ಯವಸ್ಥೆ.
12. ಆರೋಗ್ಯ ರಕ್ಷಾ ಸಮಿತಿಯಲ್ಲಿ ಒಮ್ಮತದಿಂದ ರೋಗಿಗಳ ಹಿತರಕ್ಷಣೆಗಾಗಿ ತೀರ್ಮಾನಿಸಬಹುದಾದ ಮತ್ಯಾವುದೇ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವುದು.

13. ಸ್ಥಳೀಯ ದಾನಿಗಳನ್ನು ಸಂಪರ್ಕಿಸಿ ಆಸ್ಪತ್ರೆಗಳಿಗೆ ವಸ್ತುರೂಪದಲ್ಲಿ ಅಥವಾ ಹಣದ ರೂಪದಲ್ಲಿ ವಂತಿಗೆ ನೀಡುವಂತೆ ಮನವೊಲಿಸಿ, ದಾನಿಗಳ ಹೆಸರಿನಲ್ಲಿ ವಿಸ್ತರಣಾ ಕೊಠಡಿಗಳ ನಿರ್ಮಾಣ ಮಾಡುವುದು.

**ಸಂಪನ್ಮೂಲ ಕ್ರೋಢೀಕರಣ:**

1. ಬಳಕೆದಾರ ಶುಲ್ಕ
2. ದಾನಿಗಳಿಂದ ವಂತಿಗೆ
3. ಎನ್.ಆರ್.ಹೆಚ್.ಎಂ. ನಿಂದ ಅನುದಾನ

**ಆರೋಗ್ಯ ರಕ್ಷಾ ಸಮಿತಿಯ ಮೆಮೋರಾಂಡಮ್ ಆಫ್ ಅಸೋಸಿಯೇಷನ್‌ನ ಪ್ರಕಾರ:-**

**ಜಿಲ್ಲಾ ಆಸ್ಪತ್ರೆಗಳಲ್ಲಿ**

ಅ) ಆಡಳಿತ ಮಂಡಳಿ
ಆ) ಸಾಮಾನ್ಯ ಮಂಡಳಿ
ಇ) ನಿರ್ವಹಣಾ ಸಮಿತಿಗಳು ಇರಬೇಕು.

**ತಾಲ್ಲೂಕು ಮಟ್ಟದ ಸಮಿತಿ**

ಅ) ಸಾಮಾನ್ಯ ಮಂಡಳಿ

ಆ) ನಿರ್ವಹಣಾ ಸಮಿತಿಗಳು ಇರಬೇಕು.

**ಪ್ರಾ.ಆ.ಕೇಂದ್ರ/ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ**

ಅ) ಆರೋಗ್ಯ ರಕ್ಷಾ ಸಮಿತಿ ಇರಬೇಕು.

## B) ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ನೀಡುತ್ತಿರುವ ಆರೋಗ್ಯ ಸೇವೆಗಳು:-

### i) ಸೇವೆಗಳು

1) ಆರೋಗ್ಯ ಕೇಂದ್ರ ಮತ್ತು ನಗರ ಕುಟುಂಬ ಕಲ್ಯಾಣ ಕೇಂದ್ರಗಳಲ್ಲಿನ ಸೌಲಭ್ಯಗಳು

1. ಸಂತಾನೋತ್ಪತ್ತಿ ಹಾಗೂ ಮಗುವಿನ ಆರೋಗ್ಯ ಕಾರ್ಯಕ್ರಮ
   1) ಗರ್ಭಿಣಿ ಆರೈಕೆ
   2) ಬಾಣಂತಿ ಆರೈಕೆ
   3) ಕುಟುಂಬ ಕಲ್ಯಾಣ ಕಾರ್ಯಕ್ರಮ.




2. ರಕ್ಷಣಾ ಚಿಕಿತ್ಸೆ (ಏಳು ಮಾರಕ ರೋಗಗಳನ್ನು ತಡೆಗಟ್ಟಲು ಲಸಿಕಾ ಕಾರ್ಯಕ್ರಮ)
3. ನಾಯಿ ಕಡಿತಕ್ಕೆ ಒಳಗಾದವರಿಗೆ ಚುಚ್ಚು ಮದ್ದು ನೀಡುವುದು.
4. ಹೆಚ್, ಐ.ವಿ./ಏಡ್ಸ್ ಆಪ್ತ ಸಮಾಲೋಚನೆ ಹಾಗೂ ತಪಾಸಣೆ.
5. ಕ್ಯಾನ್ಸರ್ ರೋಗಗಳ ಪರಿಶೀಲನೆ ಮತ್ತು ಪತ್ತೆ ಮಾಡುವುದು
6. ಕ್ಷಯರೋಗ ತಪಾಸಣೆ ಮತ್ತು ಚಿಕಿತ್ಸೆ (ಡಾಟ್ಸ್)
7. ಸಾಮಾನ್ಯ ಖಾಯಿಲೆಗಳಿಗೆ ಚಿಕಿತ್ಸೆ
8. ಜನನಾಂಗ ಸೋಂಕು/ಲೈಂಗಿಕ ಸೋಂಕುಗಳ ಬಗ್ಗೆ ರೋಗಿಗಳಿಗೆ ಅರಿವು ಮೂಡಿಸುವುದು ಹಾಗೂ ತಪಾಸಣೆ ಮತ್ತು ಚಿಕಿತ್ಸೆ
9. ಪ್ರಯೋಗ ಶಾಲಾ ಸೌಲಭ್ಯಗಳು.
10. ಮಲೇರಿಯಾ ರಕ್ತ ಲೇಪನ ಸಂಗ್ರಹ ಮತ್ತು ಚಿಕಿತ್ಸೆ.
11. ಸಾಂಕ್ರಾಮಿಕ ರೋಗ ನಿಯಂತ್ರಣಕ್ಕೆ ಸಹಾಯ ವೇದಿಕೆ ಸೌಲಭ್ಯ.
12. ಶಾಲಾ ಆರೋಗ್ಯ ಕಾರ್ಯಕ್ರಮ

## 2) ಹೆರಿಗೆ ಆಸ್ಪತ್ರೆ ಮತ್ತು ರೆಫರಲ್ ಆಸ್ಪತ್ರೆ

### ಹೊರ ರೋಗಿಗಳ ಸೇವೆಗಳು

1. ಸಂತಾನೋತ್ಪತ್ತಿ ಹಾಗೂ ಮಗುವಿನ ಆರೋಗ್ಯ ಕಾರ್ಯಕ್ರಮ:
   1) ಗರ್ಭಿಣಿ ಆರೈಕೆ
   2) ಬಾಣಂತಿ ಆರೈಕೆ
   3) ಕುಟುಂಬ ಕಲ್ಯಾಣ ಕಾರ್ಯಕ್ರಮ.



2. ರಕ್ಷಣಾ ಚಿಕಿತ್ಸೆ (ಏಳು ಮಾರಕ ರೋಗಗಳನ್ನು ತಡೆಗಟ್ಟಲು ಲಸಿಕಾ ಕಾರ್ಯಕ್ರಮ)
3. ಹೆಚ್.ಐ.ವಿ./ಏಡ್ಸ್ ಆಪ್ತ ಸಮಾಲೋಚನೆ ಹಾಗೂ ತಪಾಸಣೆ
4. ಪ್ರಯೋಗ ಶಾಲಾ ಸೌಲಭ್ಯಗಳು.
5. ಕ್ಯಾನ್ಸರ್ ರೋಗಿಗಳ ಪರಿಶೀಲನೆ ಮತ್ತು ರೋಗಪತ್ತೆ ಹಚ್ಚುವಿಕೆ.
6. ಜನನಾಂಗ ಸೋಂಕು /ಲೈಂಗಿಕ ಸೋಂಕುಗಳ ಬಗ್ಗೆ ರೋಗಿಗಳಿಗೆ ಅರಿವು ಮೂಡಿಸುವುದು ಹಾಗೂ ತಪಾಸಣೆ ಮತ್ತು ಚಿಕಿತ್ಸೆ
7. ಕ್ಷಯರೋಗ ತಪಾಸಣೆ ಮತ್ತು ಚಿಕಿತ್ಸೆ (ಡಾಟ್ಸ್)
8. ಸಾಮಾನ್ಯ ಖಾಯಿಲೆಗಳಿಗೆ ಚಿಕಿತ್ಸೆ
9. ನಾಯಿ ಕಡಿತಕ್ಕೆ ಒಳಗಾದವರಿಗೆ ಚುಚ್ಚು ಮದ್ದು ನೀಡುವುದು.
10. ಮಲೇರಿಯಾ ರಕ್ತ ಲೇಪನ ಸಂಗ್ರಹ ಮತ್ತು ಚಿಕಿತ್ಸೆ.
11. ಸಾಂಕ್ರಾಮಿಕ ರೋಗ ನಿಯಂತ್ರಣಕ್ಕೆ ಸಹಾಯ ವೇದಿಕೆ ಸೌಲಭ್ಯ.
12. ಶಾಲಾ ಆರೋಗ್ಯ ಕಾರ್ಯಕ್ರಮ

### ಒಳರೋಗಿಗಳ ಸೇವೆಗಳು

1. ಎಲ್ಲಾ ಹೆರಿಗೆ ಆಸ್ಪತ್ರೆಗಳಲ್ಲಿ ಸಾಮಾನ್ಯ ಹೆರಿಗೆಯ ಸೇವೆಗಳು
2. ಶಿಶು ಸ್ನೇಹಪರ ಆಸ್ಪತ್ರೆ

3. ಸಂತಾನ ಹರಣ ಶಸ್ತ್ರ ಚಿಕಿತ್ಸೆಗಳು– ಟ್ಯೂಬೆಕ್ಟಮಿ, ಉದರ ದರ್ಶಕ, ನೋಸ್ಕಾಲ್‌ಪಲ್, ವ್ಯಾಸಕ್ಟಮಿ.
4. ವೈದ್ಯಕೀಯ ಗರ್ಭಪಾತ
5. ಹೆರಿಗೆ ಸಮಯದಲ್ಲಿ ತಾಯಿಯಿಂದ ಮಗುವಿಗೆ ಹರಡುವ ಹೆಚ್.ಐ.ವಿ. ರೋಗವನ್ನು ತಡೆಗಟ್ಟುವುದು.
6. ಎನ್.ಎಸ್.ಟಿ. ಮತ್ತು ಡಾಪ್ಲರ್ ಸೌಲಭ್ಯ
7. ಗಂಡಾಂತರ ಹೆರಿಗೆ ಸೌಲಭ್ಯ (ರೆಫರಲ್ ಆಸ್ಪತ್ರೆಗಳಲ್ಲಿ ಮಾತ್ರ)
8. ಸಿಜೇರಿಯನ್ ಹಾಗೂ ವಿವಿಧ ರೀತಿಯ ಶಸ್ತ್ರ ಚಿಕಿತ್ಸಾ ಸೌಲಭ್ಯಗಳು (ರೆಫರಲ್ ಆಸ್ಪತ್ರೆಗಳಲ್ಲಿ ಮಾತ್ರ)
9. ಸ್ತ್ರೀ ರೋಗದ ಸರಳ ಶಸ್ತ್ರ ಚಿಕಿತ್ಸೆಗಳು (ರೆಫರಲ್ ಆಸ್ಪತ್ರೆಗಳಲ್ಲಿ ಮಾತ್ರ)
10. ಮುಂದುವರಿದ ಎಂಡೋಸ್ಕೋಪಿಕ್ ಶಸ್ತ್ರ ಚಿಕಿತ್ಸೆ (ರೆಫರಲ್ ಆಸ್ಪತ್ರೆಗಳಲ್ಲಿ ಮಾತ್ರ)
11. ರೆಫರಲ್ ಆಸ್ಪತ್ರೆಗಳಲ್ಲಿ ಮಾತ್ರೆ ಮತ್ತು ಸೋನೋಗ್ರಾಫಿ ಮತ್ತು ಕಾಲೊಸ್ಕೋಪಿ
12. ಎಲ್ಲಾ ರೆಫರಲ್ ಮತ್ತು ಹೆರಿಗೆ ಆಸ್ಪತ್ರೆಗಳಲ್ಲಿ ಹುಟ್ಟಿದ ಮಗುವಿಗೆ ಉಚಿತವಾಗಿ ಜನನ ಪ್ರಮಾಣ ಪತ್ರವನ್ನು ನೀಡಲಾಗುವುದು.
13. ಒಳರೋಗಿಗಳಿಗೆ ಉಚಿತ ಹಾಲು, ಒಂದು ಪೌಂಡ್ ಬ್ರೆಡ್ ಮತ್ತು ಬಾಳೆಹಣ್ಣು ವಿತರಣೆ ಮಾಡಲಾಗುವುದು.
14. ಅರ್ಹ ಫಲಾನುಭವಿಗಳಿಗೆ ಉಚಿತವಾಗಿ ಮಡಿಲು ಕಿಟ್ ಹಾಗೂ ಜನನಿ ಸುರಕ್ಷಾ ಯೋಜನೆ ಅಡಿಯಲ್ಲಿ ಚೆಕ್ ವಿತರಿಸಲಾಗುವುದು.

**ii) ಬಿ.ಬಿ.ಎಂ.ಪಿ.ಆಸ್ಪತ್ರೆಗಳ ಸಂದರ್ಶಕ ಮಂಡಳಿ**

**ಉದ್ದೇಶ:–**

1. ಸಮುದಾಯ ಭಾಗವಹಿಸುವಿಕೆಯನ್ನು ಖಾತ್ರಿಪಡಿಸುವುದು.
2. ಆರೋಗ್ಯ ಕೇಂದ್ರಗಳ ಕಾರ್ಯನಿರ್ವಹಣೆಯನ್ನು ಅಭಿವೃದ್ಧಿ ಪಡಿಸುವುದು.
3. ಕೇಂದ್ರಗಳಲ್ಲಿ ದೊರೆಯುತ್ತಿರುವ ಸೇವೆಯ ಕುರಿತು ಮಾಹಿತಿಯನ್ನು ಪಡೆದುಕೊಳ್ಳುವುದು.
4. ಭ್ರಷ್ಟಾಚಾರವನ್ನು ಹೊಡೆದಟ್ಟಿ ಸಾರ್ವಜನಿಕ ದೂರುಗಳನ್ನು ಕಡಿಮೆ ಮಾಡುವುದು.

5. ಆಸ್ಪತ್ರೆಯಲ್ಲಿನ ಕುಂದುಕೊರತೆಗಳನ್ನು ಪರಿಹರಿಸುವುದು
6. ಪ್ರತಿಯೊಂದು ರೆಫರಲ್ ಆಸ್ಪತ್ರೆಗೆ ಒಂದರಂತೆ ಈಗ ಆರು ಮಂಡಳಿಗಳಿವೆ
7. ಪ್ರತಿಮಂಡಳಿಯಲ್ಲಿ 10–12 ಸದಸ್ಯರಿರುತ್ತಾರೆ.
8. ಸಾರ್ವಜನಿಕ ಕಾರ್ಯಗಳ ಸಮಿತಿಗಳ ಸದಸ್ಯರು, ರೋಟರಿ ಸದಸ್ಯರು, ಲಯನ್ಸ್ ಕ್ಲಬ್ ಸದಸ್ಯರು, ಖಾಸಗಿಯಾಗಿ ಕಾರ್ಯನಿರ್ವಹಿಸುತ್ತಿರುವ ವೈದ್ಯರು, ಮತ್ತು ನಿವೃತ್ತ ವೈದ್ಯರು, ಸಾಮಾಜಿಕ ಕಾರ್ಯಕರ್ತರು ಮತ್ತು ಇನ್ನಿತರ ಸ್ವಯಂ ಸೇವಾ ಸಂಸ್ಥೆಗಳು ಈ ಮಂಡಳಿಯ ಸದಸ್ಯರಾಗಿರುತ್ತಾರೆ.
9. ಈ ಮಂಡಳಿಯು 2–3 ತಿಂಗಳಲ್ಲಿ ಒಮ್ಮೆ ಸಭೆ ಸೇರುತ್ತಾರೆ.

**iii) ಪ್ರಸ್ತುತ ನಗರ ಪಾಲಿಕೆಯ ಆಸ್ಪತ್ರೆಗಳಲ್ಲಿ ಸಾರ್ವಜನಿಕರಿಗೆ ನೀಡಲಾಗುವ ಈ ಕೆಳಕಂಡ ಸೇವೆಗಳಿಗೆ ಶುಲ್ಕಗಳನ್ನು ಈ ರೀತಿ ವಿಧಿಸಲಾಗುತ್ತದೆ.**

ಬಡತನ ರೇಖೆಗಿಂತ ಕೆಳಗಿರುವವರು, ಅಂತ್ಯೋದಯ ಕಾರ್ಡನ್ನು ಹೊಂದಿರುವವರಿಗೆ ಹಾಗೂ ಆಸ್ಪತ್ರೆ ಸಂದರ್ಶಕ ಮಂಡಳಿಯು ಶಿಫಾರಸ್ಸು ಮಾಡುವ ಬಡ ರೋಗಿಗಳಿಗೆ ಈ ಸೇವಾ ಶುಲ್ಕದಿಂದ ವಿನಾಯಿತಿ ನೀಡಲಾಗಿದೆ. ಸೇವಾ ಶುಲ್ಕದ ವಿವರಗಳನ್ನು ಎಲ್ಲಾ ಆಸ್ಪತ್ರೆಗಳಲ್ಲಿ ಪ್ರಕಟಿಸಬೇಕು.

| ಕ್ರ ಸಂ | ಚಿಕಿತ್ಸೆಯ ವಿವರಗಳು | ಶುಲ್ಕಗಳು |
|---|---|---|
| 1 | ಹೊರ ರೋಗಿಗಳ ನೋಂದಣಿ ವೆಚ್ಚ | 05.00 |
| 2 | ಸಹಜ ಪ್ರಸೂತಿ ವೆಚ್ಚ | 300.00 |
| 3 | ಸಹಜ ಪ್ರಸೂತಿ–ಕ್ಲಿಷ್ಟಕರ ಹೆರಿಗೆ | 350.00 |
| 4 | ಡಿ.ಅಂಡ್.ಸಿ | 100.00 |
| 5 | ವೈದ್ಯಕೀಯ ಗರ್ಭಪಾತ | 150.00 |
| 6 | ಸಿಸೇರಿಯನ್ ಶಸ್ತ್ರ ಚಿಕಿತ್ಸೆ | 500.00 |
| 7 | ಗರ್ಭನಾಳದ ಮರು ಜೋಡಣೆ ಚಿಕಿತ್ಸೆ | 250.00 |
| 8 | ಸ್ಕ್ಯಾನಿಂಗ್ | 100.00 |
| 9 | ಲ್ಯಾಪರಾಟಮಿ ಶಸ್ತ್ರ ಚಿಕಿತ್ಸೆ | 300.00 |
| 10 | ಎಂಡೋಸ್ಕೋಪಿಕ್ ಶಸ್ತ್ರ ಚಿಕಿತ್ಸೆ | 500.00 |

| | | |
|---|---|---|
| 11 | ಕಲ್ಪೋಪೆರಿನಿಯೋರಫಿ | 200.00 |
| 12 | ಗರ್ಭಕೋಶ ಹರಣ ಶಸ್ತ್ರ ಚಿಕಿತ್ಸೆ | 500.00 |
| 13 | ಅಂಡಾಶಯ ಶಸ್ತ್ರ ಚಿಕಿತ್ಸೆ | 400.00 |
| 14 | ಗರ್ಭ ಕೊರಳಿನ ಬಯಾಪ್ಸಿ | 100.00 |
| 15 | ವ್ಹೋಲಾರ್ ಗರ್ಭದ ಗರ್ಭಪಾತ | 300.00 |
| 16 | ರಕ್ತದ ಸಕ್ಕರೆ ಪ್ರಮಾಣ | 20.00 |
| 17 | ರಕ್ತದ ಕೊಬ್ಬಿನಾಂಶದ ಪ್ರಮಾಣ | 20.00 |
| 18 | ಇ.ಸಿ.ಜಿ. | 30.00 |
| 19 | ರಕ್ತದ ಹಿಮೋಗ್ಲೋಬಿನ್ ಅಂಶ | 10.00 |
| 20 | ರಕ್ತದ ಗುಂಪು | 20.00 |

## 2) ಇತರೆ ಸೇವೆಗಳು:–

### i) ಆರೋಗ್ಯ ಕವಚ:–




ಆರೋಗ್ಯ ಕವಚ "108" ಯೋಜನೆ: ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಆ.ಕು.ಕ. 10 ಎಸ್ಪಿಕ್ಯೋ 2007. ಬೆಂಗಳೂರು. ದಿನಾಂಕ 11ನೇ ಆಗಸ್ಟ್ 2008 ರಿಂದ ಸಮಗ್ರ ತುರ್ತು ಸೇವೆಯನ್ನು ಸಾರ್ವಜನಿಕ – ಖಾಸಗೀ ಸಹಭಾಗಿತ್ವದಲ್ಲಿ ತುರ್ತು ನಿರ್ವಹಣೆ ಸಂಶೋಧನಾ ಸಂಸ್ಥೆ (ಇ.ಎಂ.ಆರ್.ಐ). ಸಿಕಂದರಾಬಾದ್ ರವರ ಮೂಲಕ ಕರ್ನಾಟಕದಲ್ಲಿ "ಆರೋಗ್ಯ ಕವಚ" ಯೋಜನೆಯನ್ನು ಜಾರಿಗೊಳಿಸಲಾಗಿದೆ.

**ಮುಖ್ಯ ಉದ್ದೇಶ:–**

- ತುರ್ತು ಚಿಕಿತ್ಸೆಯ ಮೂಲಕ ಗರ್ಭಿಣಿಯರಿಗೆ ತೊಡಕಿನ ಹೆರಿಗೆಯಿಂದ ಉಂಟಾಗುವ ತಾಯಿ ಮತ್ತು ಮಗುವಿನ ಮರಣವನ್ನು ಕಡಿಮೆಗೊಳಿಸುವ ಸಲುವಾಗಿ.

- ಅಪಘಾತಗಳಿಂದ ಸಂಭವಿಸಬಹುದಾದ ಸಾವುಗಳು, ಅಂಗವಿಕಲತವನ್ನು ಕಡಿಮೆ ಮಾಡುವ ಸಲುವಾಗಿ,
- ಇತರೆ ತುರ್ತು ಆರೋಗ್ಯ ಸೇವೆಗಳಿಗಾಗಿ (ವೈದ್ಯಕೀಯ, ಪೋಲೀಸ್ ಮತ್ತು ಅಗ್ನಿಶಾಮಕ)

**ಈ ಯೋಜನೆಯಡಿಯಲ್ಲಿ ದೊರೆಯುವ ಸೌಲಭ್ಯಗಳು**

- ಅಪಘಾತ, ಹಾವು ಕಡಿತ, ಗರ್ಭಿಣಿ, ಹೆರಿಗೆ ಸಂದರ್ಭ ಇತ್ಯಾದಿ ಪ್ರಕರಣಗಳ ವೈದ್ಯಕೀಯ ತುರ್ತು ಸನ್ನಿವೇಶಗಳಲ್ಲಿ ಮತ್ತು ಪೋಲೀಸ್ ಹಾಗೂ ಅಗ್ನಿಶಾಮಕಕ್ಕೆ ಸಂಬಂಧಿಸಿದ ತುರ್ತು ಪರಿಸ್ಥಿತಿಗಳಲ್ಲಿ ಮೊಬೈಲ್/ ಸ್ಥಿರ ದೂರವಾಣಿ ಮೂಲಕ "108" ಕ್ಕೆ ಕರೆ ಮಾಡಿದಲ್ಲಿ ಕೇಂದ್ರದಲ್ಲಿನ ತುರ್ತು ಸ್ಥಿತಿ ನಿರ್ವಹಿಸುವ ತಂಡವು ಆ ಕರೆಯ ಬಗ್ಗೆ ತಕ್ಷಣ ಕಾರ್ಯಪ್ರವೃತ್ತವಾಗುತ್ತದೆ.
- ಸದರಿ ಕೇಂದ್ರವು ಅರೆ ವೈದ್ಯಕೀಯ ಸಿಬ್ಬಂದಿ ಹಾಗೂ ಆಧುನಿಕ ಉಪಕರಣಗಳನ್ನೊಳಗೊಂಡ ಆಂಬುಲೆನ್ಸ್‌ನ್ನು ಘಟನೆಯ ಸ್ಥಳಕ್ಕೆ ವಿಳಂಬವಿಲ್ಲದೆ ಕಳುಹಿಸಲು ಏರ್ಪಾಡು ಮಾಡುತ್ತದೆ. ಘಟನೆಯ ಸ್ಥಳದಲ್ಲಿ ಅಗತ್ಯ ತುರ್ತು ಚಿಕಿತ್ಸೆಯನ್ನು ನೀಡಿ, ತಕ್ಷಣ ಆಸ್ಪತ್ರೆಗೆ ಸೇರಿಸುವ ವ್ಯವಸ್ಥೆಯನ್ನು ಮಾಡಲಾಗುತ್ತದೆ.

**108 ವಾಹನ ಘಟನೆಯ ಸ್ಥಳ ತಲುಪಲು ಇರುವ ಸರಾಸರಿ ಕಾಲಾವಕಾಶ**

- **ಪಟ್ಟಣ ಪ್ರದೇಶದಲ್ಲಿ:** ಕರೆ ಮಾಡಿದ ನಂತರ ಸರಾಸರಿ 14 ನಿಮಿಷಗಳ ಒಳಗೆ ಆಂಬುಲೆನ್ಸ್ ಸ್ಥಳಕ್ಕೆ ತಲುಪಬೇಕು.
- **ಗ್ರಾಮೀಣ ಪ್ರದೇಶಗಳಲ್ಲಿ:** ಕರೆ ಮಾಡಿದ ನಂತರ ಸರಾಸರಿ 21 ನಿಮಿಷಗಳ ಒಳಗೆ ಆಂಬುಲೆನ್ಸ್ ಸ್ಥಳಕ್ಕೆ ತಲುಪಬೇಕು.

ii) **ಸುವರ್ಣ ಆರೋಗ್ಯ ಸುರಕ್ಷಾ ಯೋಜನೆ:-**

ಈ ಯೋಜನೆಯಡಿ ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ 5 ಜನರಿಗೆ ಉನ್ನತ ದರ್ಜೆಯ ಸರ್ಕಾರಿ ಹಾಗೂ ಖಾಸಗಿ ಆಸ್ಪತ್ರೆಗಳಲ್ಲಿ ಉಚಿತ ಚಿಕಿತ್ಸೆಯನ್ನು ನೀಡಲಾಗುತ್ತದೆ. ಹೃದ್ರೋಗ, ನರರೋಗ, ಮೂತ್ರ ಪಿಂಡದ ಖಾಯಿಲೆ, ಕ್ಯಾನ್ಸರ್ ಖಾಯಿಲೆ, ಸುಟ್ಟಗಾಯಗಳು ಮತ್ತು ಪಾಲಿಟ್ರಾಮಾ ಚಿಕಿತ್ಸೆ (ಅಪಘಾತ ಮೋಟಾರ್ ವಾಹನ ಅಧಿನಿಯಮದಡಿಯಲ್ಲಿ ಬರದಿರುವ) ಹಾಗೂ ನವಜಾತ ಶಿಶುಗಳಿಗೆ ಚಿಕಿತ್ಸೆ ಮುಂತಾದ ಸೂಪರ್ ಸ್ಪೆಷಾಲಿಟಿ ಚಿಕಿತ್ಸೆಗಳನ್ನೂ ಉಚಿತವಾಗಿ ರೋಗಿಗಳಿಗೆ

ದೊರಕುವುದು. ಈ ಯೋಜನೆಯನ್ನು ಬಳ್ಳಾರಿ, ಬೀದರ್, ಕೊಪ್ಪಳ, ರಾಯಚೂರು, ಗುಲ್ಬರ್ಗ ಜಿಲ್ಲೆಗಳಲ್ಲಿ ಜಾರಿಗೊಳಿಸಲಾಗಿದೆ.

**ಸಹಾಯ ವೇದಿಕೆ:-**

ಜಿಲ್ಲಾ . ಆಸ್ಪತ್ರೆಗಳಲ್ಲಿ ಸಮುದಾಯಕ್ಕೆ ಸಹಾಯವಾಗಲು ಮಾಹಿತಿ, ಶಿಕ್ಷಣ, ಸಂಪರ್ಕದ ಸಮಾಲೋಚಕರ ಸಹಾಯ ಹಸ್ತ ದೊರೆಯುತ್ತದೆ.

## 3) ಬಡವರಿಗಾಗಿ ಇರುವ ಯೋಜನೆಗಳು:-

### i) ಜನನಿ ಸುರಕ್ಷಾ ಯೋಜನೆ (ಜೆ.ಎಸ್.ವೈ):

ಜನನಿ ಸುರಕ್ಷಾ ಯೋಜನೆಯು ಹಿಂದಿನ ರಾಷ್ಟ್ರೀಯ ಹೆರಿಗೆ ಭತ್ಯೆ ಯೋಜನೆಯ ಮುಂದುವರಿದ ಯೋಜನೆಯಾಗಿದೆ. ಈ ಯೋಜನೆಯನ್ನು ಸೆಪ್ಟಂಬರ್ 2005 ರಿಂದ ಕರ್ನಾಟಕದಲ್ಲಿ ಜಾರಿಗೊಳಿಸಲಾಗಿದೆ. ಬಡತನ ರೇಖೆಗಿಂತ ಕೆಳಗಿರುವ ಅಂದರೆ ಕುಟುಂಬದ ವಾರ್ಷಿಕ ಆದಾಯ ರೂ 17,000/- ಕ್ಕೂ ಕಡಿಮೆ ಇರುವ ಕುಟುಂಬ ಮತ್ತು ಎಲ್ಲಾ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಕುಟುಂಬದ ಗರ್ಭಿಣಿ ಮಹಿಳೆಯರಿಗೆ ಹೆರಿಗೆ ಸಂದರ್ಭದಲ್ಲಿ ಆರ್ಥಿಕ ಸಹಾಯವನ್ನು ನೀಡಲಾಗುತ್ತಿದೆ.

**ಈ ಕಾರ್ಯಕ್ರಮದ ಉದ್ದೇಶಗಳು:**

- ತಾಯಿ ಮತ್ತು ಶಿಶು ಮರಣ ಪ್ರಮಾಣವನ್ನು ಕಡಿಮೆಗೊಳಿಸುವುದು.
- ಎಲ್ಲಾ ಗರ್ಭಿಣಿಯರಿಗೆ ಗುಣಾತ್ಮಕ ವೈದ್ಯಕೀಯ ಸೇವೆಯನ್ನು ನೀಡುವುದು.
- ಕ್ಲಿಷ್ಟಕರ ಹೆರಿಗೆಯ ಸಂದರ್ಭದಲ್ಲಿ ತುರ್ತು ಸಿಜೇರಿಯನ್ ಶಸ್ತ್ರ ಚಿಕಿತ್ಸೆಗೆ ಅವಕಾಶ
- ವೈದ್ಯ ತಪಾಸಣೆಗೆ ಗರ್ಭಿಣಿಗೆ ಉತ್ತೇಜನ
- ಸಾಂಸ್ಥಿಕ ಹೆರಿಗೆಗೆ ಪ್ರೋತ್ಸಾಹ
- ಸಣ್ಣ ಕುಟುಂಬಕ್ಕೆ ಪ್ರೋತ್ಸಾಹ

**ಅರ್ಹತೆ:**

- ಮನೆ/ಉಪಕೇಂದ್ರ/ಸರ್ಕಾರಿ ಆಸ್ಪತ್ರೆ/ನೋಂದಾಯಿತ ಖಾಸಗಿ ಆಸ್ಪತ್ರೆಗಳಲ್ಲಿ ಸಾಮಾನ್ಯ ವಾರ್ಡಿಗೆ ದಾಖಲಾಗಿರುವ ಬಡತನ ರೇಖೆಗಿಂತ ಕೆಳಗಿರುವ ಮಹಿಳೆಯಾಗಿರಬೇಕು.



- ಪ್ರಸ್ತುತ ಹೆರಿಗೆಯು ಮೊದಲನೇ ಅಥವಾ ಎರಡನೇ ಜೀವಂತ ಹೆರಿಗೆಯಾಗಿರಬೇಕು.
- ಮಹಿಳೆಯು 19 ವರ್ಷಕ್ಕಿಂತ ಮೇಲ್ಪಟ್ಟಿರಬೇಕು
- ಗರ್ಭಿಣಿಯು ಕನಿಷ್ಠ 3 ಬಾರಿ ವೈದ್ಯರಿಂದ ತಪಾಸಣೆ ಮಾಡಿಸಿಕೊಂಡಿರಬೇಕು
- 100 ಕಬ್ಬಿಣದಂಶದ ಮಾತ್ರೆ ಮತ್ತು ಟಿ.ಟಿ. ಚುಚ್ಚುಮದ್ದನ್ನು ಪಡೆದಿರಬೇಕು. ಗರ್ಭಿಣಿಯು ಬಡಕುಟುಂಬದವಳಾಗಿದ್ದು ಆದರೆ ಬಿ.ಪಿ.ಎಲ್. ಕಾರ್ಡನ್ನು ಹೊಂದಿಲ್ಲದಿರುವ ವಿಶೇಷ ಸಂದರ್ಭದಲ್ಲಿ
- ಬಡತನ ರೇಖೆಗಿಂತ ಮೇಲ್ಪಟ್ಟ ಆದರೆ ಪ. ಜಾತಿ/ಪ. ಪಂಗಡಕ್ಕೆ ಸೇರಿದ ಮಹಿಳೆಯರು ತಮ್ಮ ಜಾತಿ ಧೃಢೀಕರಣ ಪತ್ರವನ್ನು ಸಲ್ಲಿಸಿದಲ್ಲಿ ಈ ಸೌಲಭ್ಯಕ್ಕೆ ಅರ್ಹರಾಗಿರುತ್ತಾರೆ.
- ಪಟ್ಟಣ ಅಥವಾ ನಗರ ಪ್ರದೇಶದಲ್ಲಿ ಗರ್ಭಿಣಿಯು ಬಡ ಕುಟುಂಬದವರೆಂದು ಆಶ್ರಯ ಫಲಾನುಭವಿಗಳ ಪಟ್ಟಿಯನ್ನಾಧರಿಸಿ ಪುರಸಭೆಯ ಮುಖ್ಯಾಧಿಕಾರಿ ಅಥವ ನಗರ ಸಭೆ/ಪಾಲಿಕೆ ಆಯುಕ್ತರು ನೀಡಿದ ಧೃಢೀಕರಣ ಪತ್ರ ಸಲ್ಲಿಸಿದಲ್ಲಿ ಈ ಯೋಜನೆಗಳಡಿಯಲ್ಲಿ ಸೌಲಭ್ಯಗಳನ್ನು ಪಡೆಯಬಹುದಾಗಿದೆ.
- ಅಧಿಸೂಚಿತ ಕೊಳಚೆ ಪ್ರದೇಶದಲ್ಲಿ ವಾಸವಿರುವ ಕುಟುಂಬದ ಗರ್ಭಿಣಿಯೆಂದು ಕೊಳಚೆ ನಿರ್ಮೂಲನಾ ಮಂಡಳಿಯಿಂದ ನೀಡಲಾಗಿರುವ ಪ್ರಮಾಣ ಪತ್ರಗಳನ್ನು ಸಲ್ಲಿಸಿದಲ್ಲಿ ಈ ಯೋಜನೆಗಳಡಿಯಲ್ಲಿ ಸೌಲಭ್ಯಗಳನ್ನು ಪಡೆಯಬಹುದಾಗಿದೆ.

ಈ ಯೋಜನೆಯಡಿಯಲ್ಲಿ ಫಲಾನುಭವಿಗಳಿಗೆ ದೊರೆಯುವ ಸೌಲಭ್ಯಗಳು:-

| | | |
|---|---|---|
| ಮನೆಯಲ್ಲಾದ ಹೆರಿಗೆಗೆ | ಗ್ರಾಮೀಣ ಮತ್ತು ನಗರ ಪ್ರದೇಶಗಲ್ಲಿ | ರೂ.500 |
| ಆಸ್ಪತ್ರೆ ಹೆರಿಗೆ | ಗ್ರಾಮೀಣ ಪ್ರದೇಶದ ಮಹಿಳೆಗ | ರೂ.700 |
| | ನಗರ ಪ್ರದೇಶದ ಮಹಿಳೆಗೆ | ರೂ.600 |
| | ಸಿಸೇರಿಯನ್ ಹೆರಿಗೆ ಆದ ಮಹಿಳೆಗೆ | ರೂ.1,500 |

## ii) ಮಡಿಲು ಯೋಜನೆ:

15ನೇ ಆಗಸ್ಟ್ 2007 ರಂದು ಈ ಯೋಜನೆಯನ್ನು ಕರ್ನಾಟಕ ಸರ್ಕಾರ ಜಾರಿಗೊಳಿಸಿದೆ. ಸರ್ಕಾರಿ ಆಸ್ಪತ್ರೆಗಳಲ್ಲಿ ಹೆರಿಗೆಮಾಡಿಸಿಕೊಂಡ ಬಡತನ ರೇಖೆಗಿಂತ ಕೆಳಗಿರುವ ಕುಟುಂಬದ ಮಹಿಳೆಯರಿಗೆ ಹೆರಿಗೆ ನಂತರ ರೂ 825 /- ಮೌಲ್ಯದ ಒಂದು ವೈದ್ಯಕೀಯ ಕಿಟ್ಟನ್ನು ಉಚಿತವಾಗಿ ನೀಡಲಾಗುವುದು.

ಈ ಕಿಟ್ಟಿನಲ್ಲಿ ಪ್ರಸವ ನಂತರ ತಾಯಿ ಹಾಗೂ ಮಗುವಿನ ಸಂರಕ್ಷಣೆಗೆ ಬೇಕಾದ ಅತ್ಯವಶ್ಯಕ 19 ಸಾಮಗ್ರಿಗಳು ಇರುತ್ತವೆ.

| ಕ್ರ.ಸಂ. | ಸಾಮಗ್ರಿಯ ಹೆಸರು | ಪ್ರಮಾಣ | ದರ (ರೂ) |
|---|---|---|---|
| 1. | ಸೊಳ್ಳೆ ಪರದೆ (ತಾಯಿಗೆ) | 1 | 80 |
| 2. | ಜಮಖಾನ (ಮೀಡಿಯಂ ಸೈಜ್) | 1 | 80 |
| 3. | ಬೆಡ್ ಶೀಟ್ (ಮೀಡಿಯಂ) | 1 | 50 |
| 4. | ತಾಯಿಗೆ ದಪ್ಪನೆ ಹೊದಿಕೆ(ಮೀಡಿಯಂ) | 1 | 80 |
| 5. | ತಾಯಿಗೆ ಮೈಸೂರ್ ಸ್ಯಾಂಡಲ್ ಸೋಪ್ | 4 | 30 |
| 6. | ಬಟ್ಟೆ ಸಾಬೂನು | 4 | 20 |
| 7. | ಬಾಣಂತಿಗೆ ಹೊಟ್ಟೆಗೆ ಹಾಕುವ ಬೆಲ್ಟ್ | 1 | 40 |
| 8. | ಸ್ಯಾನಿಟರಿ ಪ್ಯಾಡ್ಸ್ (ಚೌಕ ಕಾಟನ್ ಬಟ್ಟೆ ವಿತ್ ಕುಣಿಕೆ) | 6 | 30 |
| 9. | ತಾಯಿಗೆ ಬಾಚಣಿಗೆಯೊಂದಿಗೆ ಕೊಬ್ಬರಿ ಎಣ್ಣೆ (250ಮಿಲೀ) | 1 | 25 |
| 10. | ತಾಯಿಗೆ ಟವಲ್ | 2 | 30 |
| 11. | ಮಗುವಿಗೆ ರಬ್ಬರ್ ಶೀಟ್ ಮೇಲೆ ಬೆಡ್ ಶೀಟ್ | 3 | 60 |
| 12. | ಮಗುವಿಗೆ ಸೊಳ್ಳೆ ಪರದೆ | 1 | 40 |
| 13. | ಮಗುವಿಗೆ ಹೊದಿಕೆ | 1 | 40 |
| 14. | ಮಗುವಿಗೆ ಮೈ ಸಾಬೂನು | 4 | 40 |

| | | | |
|---|---|---|---|
| 15. | ಮಗುವಿಗೆ ರಬ್ಬರ್ ಶೀಟ್ | 1 | 40 |
| 16. | ಮಗುವಿಗೆ ಡೈಪರ್ | 6 | 30 |
| 17. | ಮಗುವಿಗೆ ಜಬ್ಲ | 6 | 30 |
| 18. | ಮಗುವಿಗೆ ಸ್ವೆಟರ್+ ಕುಲಾವಿ+ ಕಾಲುಚೀಲ | 1 | 50 |
| 19. | ಒಂದು ಪಾರದರ್ಶಕ ಪ್ಲಾಸ್ಟಿಕ ಬ್ಯಾಗ್ (ಕಿಟ್) | 1 | 30 |
| | ಒಟ್ಟು | 825 ರೂ.ಗಳು | |

## ಮಡಿಲು ಕಿಟ್‌ನಲ್ಲಿ ಇರುವ ಸಾಮಗ್ರಿಗಳು:


Checks Bed Sheet


Jamakhana


Towel


Cotton Diaper


Bed Sheet


Jabla


Sweater, Socks and Cap


Rubber Sheets


Andominal Belt


Child Bed Sheet


Sanitary pads for mothers


Flannel Bed Sheet


Soaps and Detergents Kit


Mosquito Curtain

## iii) ಪ್ರಸೂತಿ ಆರೈಕೆ:

ಬಡತನ ರೇಖೆಗಿಂತ ಕೆಳಗಿರುವ ಹಾಗೂ ಪರಿಶಿಷ್ಟ ಜಾತಿ ಮತ್ತು ಪಂಗಡ ಕುಟುಂಬದ ಎಲ್ಲಾ ಗರ್ಭಿಣಿ ಮಹಿಳೆಯರು ಈ ಸೌಲಭ್ಯಕ್ಕೆ ಅರ್ಹರಾಗಿರುತ್ತಾರೆ. ಈ ಯೋಜನೆಯಡಿಯಲ್ಲಿ ವೈದ್ಯರಿಂದ ತಪಾಸಣೆ ಮಾಡಿಸಿಕೊಂಡ ಗರ್ಭಿಣಿ ಮಹಿಳೆಯರಿಗೆ ತಲಾ 1000 ರೂಪಾಯಿಗಳನ್ನು ಎರಡು ಬಾರಿ (ಒಟ್ಟು 2000 ರೂ.ಗಳು) ನೀಡಲಾಗುತ್ತದೆ.

- ಮಹಿಳೆಯು 4 ರಿಂದ 6 ತಿಂಗಳ ಗರ್ಭಿಣಿಯಾಗಿದ್ದಾಗ ಮೊದಲ ಬಾರಿಗೆ ರೂ. 1000 ಗಳ ಚೆಕ್ ನೀಡಲಾಗುವುದು.
- ಹೆರಿಗೆಯ ನಂತರ 48 ಗಂಟೆಗಳೊಳಗೆ ರೂ. 1000ಗಳ ಎರಡನೇ ಚೆಕ್ಕನ್ನು ನೀಡಲಾಗುವುದು.

**ಕಾರ್ಯಕ್ರಮದ ಉದ್ದೇಶ:**



ಗರ್ಭಿಣಿ ಮಹಿಳೆಯು ಉತ್ತಮ ಪೌಷ್ಠಿಕ ಆಹಾರ ಪಡೆದು ಆರೋಗ್ಯವಂತಳಾಗಿ ಸುಸೂತ್ರವಾಗಿ ಹೆರಿಗೆಯಾಗಬೇಕು ಮತ್ತು ನವಜಾತ ಶಿಶುವಿನ ಆರೋಗ್ಯ ಉತ್ತಮವಾಗಿರಬೇಕು ಎಂಬ ಉದ್ದೇಶದಿಂದ ಈ ಸಹಾಯ ಧನವನ್ನು ನೀಡಲಾಗುವುದು.

**ಸೌಲಭ್ಯ ಪಡೆಯಲು ಫಲಾನುಭವಿಗಳಿಗೆ ಇರಬೇಕಾದ ಅರ್ಹತೆಗಳು**

- ಗರ್ಭಿಣಿಯು ಆ ಪ್ರದೇಶದ ಕಿರಿಯ ಮಹಿಳಾ ಆರೋಗ್ಯ ಕಾರ್ಯಕರ್ತೆಯ ಬಳಿ ತನ್ನ ಹೆಸರನ್ನು ನಮೂದಿಸಿಕೊಳ್ಳಬೇಕು.
- ಇವರಿಂದ ತಾಯಿಕಾರ್ಡ್‌ನ್ನು ಪಡೆದು ಇದರಲ್ಲಿ ಹೆರಿಗೆಗೆ ಸಂಬಂಧಪಟ್ಟ ಎಲ್ಲಾ ಮಾಹಿತಿಗಳನ್ನು ಭರ್ತಿಮಾಡಿಸಿರಬೇಕು.
- ತಮ್ಮ ಮಾಸಿಕ ತಪಾಸಣೆ ಸಮಯದಲ್ಲಿ ಸಂಬಂಧಪಟ್ಟ ವೈಧ್ಯಾಧಿಕಾರಿಗಳಿಂದ ಸಹಿ, ಸೀಲ್ ಮತ್ತು ದಿನಾಂಕಗಳನ್ನು ಈ ಕಾರ್ಡ್‌ನಲ್ಲಿ ನಮೂದಿಸಿರಬೇಕು.
- ಮಹಿಳೆಯು ಬಿ.ಪಿ.ಎಲ್ ಕಾರ್ಡ್ ಪ್ರತಿ/ಜಾತಿ ಪ್ರಮಾಣ ಪತ್ರವನ್ನು ಸಲ್ಲಿಸಬೇಕು.
- ಪ್ರಸ್ತುತ ಹೆರಿಗೆ ಮೊದಲನೇ ಅಥವಾ ಎರಡನೇ ಜೀವಂತ ಹೆರಿಗೆ ಎಂದು ಕಿರಿಯ ಮಹಿಳಾ ಆರೋಗ್ಯ ಸಹಾಯಕರಿಂದ ದಾಖಲುಪಡಿಸಿಕೊಂಡಿರಬೇಕು

**ಗರ್ಭಿಣಿ ದಾಖಲಾತಿ ವಿಧಾನ ಹೇಗೆ?**

**ನಗರ ಪ್ರದೇಶದಲ್ಲಿ:**

- ಸರ್ಕಾರಿ ಅಥವ ಸಾರ್ವಜನಿಕ ಆಸ್ಪತ್ರೆಗಳಲ್ಲಿ ಕರ್ತವ್ಯ ನಿರ್ವಹಿಸುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು ತಮ್ಮ ವ್ಯಾಪ್ತಿಗೆ ಬರುವ ಪ್ರದೇಶಗಳಲ್ಲಿ

ಜೆ.ಎಸ್.ವೈ. ಮತ್ತು ಮಡಿಲು ಕಾರ್ಯಕ್ರಮಗಳ ಅರ್ಹತೆ ಇರಲಿ, ಇಲ್ಲದಿರಲಿ ಎಲ್ಲಾ ಗರ್ಭಿಣಿ ಮಹಿಳೆಯರಿಗೆ ತಾಯಿ ಕಾರ್ಡನ್ನು ನೀಡಿ ಅದರಲ್ಲಿರುವ ಭಾಗ– 1, 3.ಅ ದಲ್ಲಿ ಅಗತ್ಯ ಮಾಹಿತಿಯನ್ನು ತುಂಬಿಸಿ ತಮ್ಮ ಮತ್ತು ನಿಯೋಜಿತ ವೈದ್ಯಾಧಿಕಾರಿಗಳಿಂದ ಸಹಿ ಪಡೆದು ಧೃಡೀಕರಿಸಬೇಕು.

- ಅಂಗನವಾಡಿ ಕಾರ್ಯಕರ್ತೆಯರಿಗೆ ಗರ್ಭಿಣಿಯರ ದಾಖಲಾತಿ ಜವಾಬ್ದಾರಿ ವಹಿಸಿದಾಗ ಇದರ ಮೇಲ್ವಿಚಾರಣೆಯನ್ನು ಆ ಪ್ರದೇಶದ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ನೀಡಬೇಕು. ಆಂದರೆ ಕಿರಿಯ ಮಹಿಳಾ ಆರೋಗ್ಯ ಸಹಾಕಿಯು ತಮ್ಮ ಕ್ಷೇತ್ರ ಭೇಟಿಯ ದಿನದಂದು ಅಂಗನವಾಡಿಗೆ ಭೇಟಿ ನೀಡಿ ತಾಯಿ ಕಾರ್ಡ್‌ಗಳನ್ನು ಪಡೆದಿರುವ ವಿವರವನ್ನು ಅಂಗನವಾಡಿಯಲ್ಲಿ ಇಟ್ಟಿರುವ ರಿಜಿಸ್ಟರ್ ಮೂಲಕ ತಿಳಿದುಕೊಂಡು ಗರ್ಭಿಣಿ ಮನೆಗೆ ಭೇಟಿ ನೀಡಿ ಆಕೆಗೆ ನೀಡಬೇಕಾಗಿರುವ ಸೇವೆ ಮತ್ತು ಮಾರ್ಗದರ್ಶನವನ್ನು ನೀಡಿ ವಿವರಗಳನ್ನು ತಾಯಿ ಕಾರ್ಡ್‌ಗಳಲ್ಲಿ ನಮೂದಿಸಬೇಕು.
- ಅಂಗನವಾಡಿ ಕಾರ್ಯಕರ್ತೆಯರು ತಮ್ಮ ವ್ಯಾಪ್ತಿಯಲ್ಲಿ ಇರುವ ಜೆ.ಎಸ್.ವೈ. ಅರ್ಹ ಮಹಿಳೆಯರನ್ನು ಗುರುತಿಸಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಭೇಟಿ ನೀಡಿದ ಸಮಯದಲ್ಲಿ ತಾಯಿ ಕಾರ್ಡ್ ಹಾಗೂ ಜೆಎಸ್‌ವೈ. ದಾಖಲಾತಿ ಎರಡನ್ನೂ ಮಾಡಿಸಬೇಕು.
- ಜೆ.ಎಸ್.ವೈ. ಅರ್ಹತೆಯನ್ನು ತಾಯಿ ಕಾರ್ಡಿನಲ್ಲಿ ವೈದ್ಯಾಧಿಕಾರಿಯವರಿಂದ ಧೃಡೀಕರಿಸಲು, ಬಿ.ಪಿ.ಎಲ್. ಕಾರ್ಡ್‌ನ ಛಾಯ ಪ್ರತಿ ಅಥವ ಖಂಡಿಕೆ – 3.1.1 & 3.1.6 ರಲ್ಲಿ ತಿಳಿಸಿರುವ ನಿಗದಿತ ಪ್ರಮಾಣ ಪತ್ರವನ್ನು ಒದಗಿಸುವಂತೆ ಅಂಗನವಾಡಿ ಕಾರ್ಯಕರ್ತೆಯರು, ಗರ್ಭಿಣಿಗೆ ತಿಳುವಳಿಕೆ ನೀಡಬೇಕು.
- ಗರ್ಭಿಣಿಯ ವಸತಿ ಪ್ರದೇಶದ ವ್ಯಾಪ್ತಿಯ ವೈದ್ಯಾಧಿಕಾರಿಗಳು ಯಾರು ಎಂಬುದನ್ನು ಗರ್ಭಿಣಿಗೆ ತಿಳಿಸಿ, ತಾಯಿ ಕಾರ್ಡ್‌ಗಳಲ್ಲಿ ನಮೂದಿಸಬೇಕು ಮತ್ತು ಗರ್ಭಿಣಿಯನ್ನು ಕನಿಷ್ಠ ಮೂರು ಬಾರಿ ಪರೀಕ್ಷೆಗಾಗಿ ವ್ಯಾಪ್ತಿಯ ಆಸ್ಪತ್ರೆ/ ಅರೋಗ್ಯ ಕೇಂದ್ರಕ್ಕೆ ಕಳುಹಿಸಿ ಕೊಡಬೇಕು.
- ಗರ್ಭಿಣಿಯರು ಪರೀಕ್ಷೆಗೆ ಆಗಮಿಸಿದಾಗ ವೈದ್ಯರು ಆದ್ಯತೆ ಮೇಲೆ ಅವರನ್ನು ಪರೀಕ್ಷಿಸಿ ತಾಯಿಕಾರ್ಡಿನ ಭಾಗ ಒಂದರಲ್ಲಿ ಅಗತ್ಯ ಮಾಹಿತಿ ನಮೂದಿಸಿ ಸಹಿ ಮಾಡಬೇಕು.
- ಗರ್ಭಿಣಿ ತಾಯಿಕಾರ್ಡ್ ಇಲ್ಲದೆ ಸರ್ಕಾರಿ/ಸ್ಥಳೀಯ ಸಂಸ್ಥೆಗಳ/ ನೊಂದಾಯಿತ ಖಾಸಗೀ ಆಸ್ಪತ್ರೆಗೆ ಸೇವೆಯನ್ನರಿಸಿ ಬಂದಾಗ ಆಕೆಗೆ ಸೇವೆಯನ್ನು ನೀಡಿ,

ಆಕೆ ವಾಸ ಮಾಡುವ ಪ್ರದೇಶದ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ/ ಅಂಗನವಾಡಿ ಕಾರ್ಯಕರ್ತೆ ಇವರಿಂದ ತಾಯಿ ಕಾರ್ಡ್ ಪಡೆಯುವಂತೆ ಸಲಹೆ ನೀಡಬೇಕು.

- ಗರ್ಭಿಣಿಯನ್ನು ಹೆರಿಗಾಗಿ ಯಾವುದೇ ಸರ್ಕಾರಿ/ ನೋಂದಾಯಿತ ಆಸ್ಪತ್ರೆಗೆ ದಾಖಲು ಮಾಡಿದಾಗ ದಾಖಲೆ ಮಾಡಿದಾಗ ತಾಯಿ ಕಾರ್ಡ್ ಭಾಗ ಒಂದರಲ್ಲಿ ನಿಯೋಜಿತ ವೈದ್ಯಾಧಿಕಾರಿಗಳ ಧೃಢಿಕರಣಪಿದ್ದಲ್ಲಿ ಆ ಮಹಿಳೆಗೆ ಹೆರಿಗೆ ಮಾಡಿಸಿ, ಜೆ.ಎಸ್.ವೈ. ಅಡಿಯಲ್ಲಿ ಚೆಕ್ ಮೂಲಕ ಹಣವನ್ನು ಪಾವತಿಸಬೇಕು.

## iv)) ಸಂತಾನ ಹರಣ ಶಸ್ತ್ರ ಚಿಕಿತ್ಸೆ ಕಾರ್ಯಕ್ರಮ:

ಈ ಕಾರ್ಯಕ್ರಮದ ಮುಖ್ಯ ಉದ್ದೇಶ ಕುಟುಂಬ ನಿಯಂತ್ರಣವನ್ನು ಮಾಡಿ ತನ್ಮೂಲಕ ಸಣ್ಣ ಕುಟುಂಬಕ್ಕೆ ಪ್ರೋತ್ಸಾಹ ನೀಡುವುದು.

**ಮಹಿಳೆಯರಿಗೆ:**

- ಸರ್ಕಾರಿ ಮತ್ತು ಸರ್ಕಾರಿ ಅನುದಾನಿತ ಆಸ್ಪತ್ರೆಗಳಲ್ಲಿ ಬಿ.ಪಿ.ಎಲ್. ಕಾರ್ಡ್ ಹೊಂದಿರುವ ಮಹಿಳೆಯರು ಸಂತಾನ ಹರಣ ಶಸ್ತ್ರಚಿಕಿತ್ಸೆ (ಕರೆಂಟ್ ಆಪರೇಶನ್/ ಕೈ ಆಪರೇಶನ್) ಯನ್ನು ಮಾಡಿಸಿಕೊಂಡರೆ ರೂ. 600 ಗಳ ಸಹಾಯ ಧನವನ್ನು ನೀಡಲಾಗುವುದು.



- ಸರ್ಕಾರಿ ಮತ್ತು ಸರ್ಕಾರಿ ಅನುದಾನಿತ ಆಸ್ಪತ್ರೆಗಳಲ್ಲಿ ಬಿ.ಪಿ.ಎಲ್. ರಹಿತ ಮಹಿಳೆಯರು ಸಂತಾನ ಹರಣ ಶಸ್ತ್ರ ಚಿಕಿತ್ಸೆ (ಕರೆಂಟ್ ಆಪರೇಶನ್ / ಕೈ ಆಪರೇಶನ್) ಯನ್ನು ಮಾಡಿಸಿ ಕೊಂಡರೆ 250 ರೂ. ಗಳನ್ನು ನೀಡಲಾಗುವುದು.

**ಪುರುಷರಿಗೆ**

ಸರ್ಕಾರಿ ಮತ್ತು ಸರ್ಕಾರಿ ಅನುದಾನಿತ ಆಸ್ಪತ್ರೆಗಳಲ್ಲಿ ಸಂತಾನ ಹರಣ ಶಸ್ತ್ರ ಚಿಕಿತ್ಸೆಯನ್ನು ಮಾಡಿಸಿಕೊಂಡ ಎಲ್ಲಾ (ಬಿ.ಪಿ.ಎಲ್ ರಹಿತ ಮತ್ತು ಸಹಿತ) ಪುರುಷರಿಗೆ ಸರ್ಕಾರವು ರೂ 1,100 ಗಳ ಸಹಾಯ ಧನವನ್ನು ನೀಡಲಾಗುತ್ತದೆ.

**ವಿಶೇಷ ಸೂಚನೆ:** ಮಹಿಳೆಯರು ಶಸ್ತ್ರ ಚಿಕಿತ್ಸೆಗಾಗಿ ಯವುದೇ ರೀತಿಯ ಹಣವನ್ನು ನೀಡುವ ಅವಶ್ಯಕತೆ ಇಲ್ಲ ಆದರೆ ದಿನಕ್ಕೆ 15 ರೂ.ಗಳಂತೆ ಬೆಡ್ ಚಾರ್ಜ್‌ನ್ನು ಮಹಿಳೆಯು ದಿಸ್ಚಾರ್ಜ್ ಸಮಯದಲ್ಲಿ ಆಸ್ಪತ್ರೆಯಲ್ಲಿ ಪಾವತಿಸಬೇಕು.

**V) ಪಿ.ಪಿ.ಟಿ.ಸಿ.ಟಿ.ಕಾರ್ಯಕ್ರಮ:-**



(ಪಾಲಕರಿಂದ ಮಗುವಿಗೆ HIV ಸೋಂಕು ತಡೆಯುವಿಕೆ) ಗರ್ಭಿಣಿಯರಲ್ಲಿ HIV +ve ಕಂಡುಬಂದಲ್ಲಿ ಯಶಸ್ವಿನಿ ನೆಟ್‌ವರ್ಕ್ ಆಸ್ಪತ್ರೆಗಳಲ್ಲಿ ಉಚಿತ ಸೇವೆ ಒದಗಿಸಲಾಗುತ್ತದೆ. ಪ್ರಮುಖವಾಗಿ ತಾಯಿಯಿಂದ ಮಗುವಿಗೆ HIV+ve ಸೋಂಕು ಹರಡದಂತೆ ತಡೆಗಟ್ಟಲು ಗರ್ಭಿಣಿಯರಿಗೆ (ಹೆರಿಗೆ ಸಂದರ್ಭದಲ್ಲಿ) ನೆವರಪಿನ್ ಮಾತ್ರೆ ಹಾಗೂ ಹುಟ್ಟಿದ ಮಗುವಿಗೆ ನೆವರಪಿನ್ ದ್ರವವನ್ನು ಹುಟ್ಟಿದ 72 ಗಂಟೆಗಳೊಳಗೆ ಕೊಡುವ ವ್ಯವಸ್ಥೆ ಇದೆ.

# 4. ಪಾಲಿಕೆಗೆ ಒಳಪಡುವ ಆಸ್ಪತ್ರೆಗಳ ವಿವರ

ರೆಫರಲ್ ಆಸ್ಪತ್ರೆ –06

ಹೆರಿಗೆ ಆಸ್ಪತ್ರೆ –24

ಆರೋಗ್ಯ ಕೇಂದ್ರ (ಐ.ಪಿ.ಪಿ.)–29

ಕುಟುಂಬ ಕಲ್ಯಾಣ ಕೇಂದ್ರ –19

ಸಂಚಾರಿ ಔಷಧಾಲಯಗಳು –03

ಆಯುರ್ವೇದ –01

ಯುನಾನಿ –01

| ರೆಫರಲ್ ಮತ್ತು ಹೆರಿಗೆ ಆಸ್ಪತ್ರೆಗಳು | ದೂರವಾಣಿ ಸಂಖ್ಯೆ | ರೆಫರಲ್ ಮತ್ತು ಹೆರಿಗೆ ಆಸ್ಪತ್ರೆಗಳು | ದೂರವಾಣಿ ಸಂಖ್ಯೆ |
|---|---|---|---|
| **ಹೊಸಹಳ್ಳಿ ರೆಫರಲ್ ಆಸ್ಪತ್ರೆ** | 22975766 | ಗವಿಪುರಂ ಹೆರಿಗೆ ಆಸ್ಪತ್ರೆ | 26611231 |
| ರಾಜಾಜಿನಗರ ಹೆರಿಗೆ ಆಸ್ಪತ್ರೆ | 22975666 | ಬನಶಂಕರಿ ರೆಫರಲ್ ಆಸ್ಪತ್ರೆ | 22975767 |
| ನಂದಿನಿ ಲೇಔಟ್ ಹೆರಿಗೆ ಆಸ್ಪತ್ರೆ | 22975667 | ವಿಲ್ಸನ್ ಗಾರ್ಡನ್ ಹೆರಿಗೆ ಆಸ್ಪತ್ರೆ | 22975773 |
| ಮಾಗಡಿ ರಸ್ತೆ ಹೆರಿಗೆ ಆಸ್ಪತ್ರೆ ಹೆರಿಗೆ ಆಸ್ಪತ್ರೆ | 22975789 | ಪೋಬ್ಬತ್ತಿ ಹೆರಿಗೆ ಆಸ್ಪತ್ರೆ | 22975673 |
| ಮೂಡಲಪಾಳ್ಯ ಹೆರಿಗೆ ಆಸ್ಪತ್ರೆ | 9480683921 | ಯಡಿಯೂರು ಹೆರಿಗೆ ಆಸ್ಪತ್ರೆ | 22975769 |
| **ಶ್ರೀರಾಮಪುರ ರೆಫರಲ್ ಆಸ್ಪತ್ರೆ** | 22975674 | ಜಯನಗರ ಹೆರಿಗೆ ಆಸ್ಪತ್ರೆ | 22975771 |
| ಕಾಟನ್‌ಪೇಟೆ ಹೆರಿಗೆ ಆಸ್ಪತ್ರೆ | 22975675 | **ಹೆಚ್. ಸಿದ್ದಯ್ಯ ರಸ್ತೆ ರೆಫರಲ್ ಆಸ್ಪತ್ರೆ** | 22975785 |
| ಯಶವಂತಪುರ ಹೆರಿಗೆ ಆಸ್ಪತ್ರೆ | 22975681 | ದಾಸಪ್ಪ ಹೆರಿಗೆ ಆಸ್ಪತ್ರೆ | 22975684 |
| ಮನವರ್ತ ಪೇಟೆ ಹೆರಿಗೆ ಆಸ್ಪತ್ರೆ | 22975676 | ಆಸ್ಟಿನ್ ಟೌನ್ ಹೆರಿಗೆ ಆಸ್ಪತ್ರೆ | 22975868 |
| ಗಂಗಾನಗರ ಹೆರಿಗೆ ಆಸ್ಪತ್ರೆ | 22975878 | ಪ್ಯಾಲೇಸ್ ಗುಟ್ಟಳ್ಳಿ ಹೆರಿಗೆ ಆಸ್ಪತ್ರೆ | 23447072 |
| ಮುನಿರೆಡ್ಡಿ ಪಾಳ್ಯ ಹೆರಿಗೆ ಆಸ್ಪತ್ರೆ | 22975879 | ಶಾಂತಿನಗರ ಹೆರಿಗೆ ಆಸ್ಪತ್ರೆ | 22975867 |
| **ಜೆ.ಜೆ.ಆರ್ ನಗರ ರೆಫರಲ್ ಆಸ್ಪತ್ರೆ** | 22975786 | ಅಲಸೂರು ಹೆರಿಗೆ ಆಸ್ಪತ್ರೆ | 22975876 |
| ಅಜಾದ್ ನಗರ ಹೆರಿಗೆ ಆಸ್ಪತ್ರೆ | 22975787 | ತಿಮ್ಮಯ್ಯ ರಸ್ತೆ ಹೆರಿಗೆ ಆಸ್ಪತ್ರೆ | 22975877 |
| ಸಿರಸಿ ರಸ್ತೆ ಹೆರಿಗೆ ಆಸ್ಪತ್ರೆ | 22975788 | ಕಾಕ್ಸ್ ಟೌನ್ ಹೆರಿಗೆ ಆಸ್ಪತ್ರೆ | 22975893 |
| ಎಸ್. ಆರ್. ಕಾಲೋನಿ ಹೆರಿಗೆ ಆಸ್ಪತ್ರೆ | 22975768 | ಡಿ.ಜೆ.ಹಳ್ಳಿ ಹೆರಿಗೆ ಆಸ್ಪತ್ರೆ | 22975881 |

| ಆರೋಗ್ಯ ಕೇಂದ್ರಗಳು | ಫೋನ್ ನಂ | ಆರೋಗ್ಯ ಕೇಂದ್ರಗಳು | ಫೋನ್ ನಂ |
|---|---|---|---|
| ಭುವನೇಶ್ವರಿ ನಗರ | 9541036449 | ಎ.ಡಿ. ಹಳ್ಳಿ | 9480683793 |
| ಬಾಗಲೂರು | 22975885 | ನಂದಿನಿ ಲೇ ಔಟ್ | 22975667 |
| ಮರ್ಫಿಟೌನ್ | 22975882 | ಮೂಡಲಪಾಳ್ಯ | 9480683803 |
| ಬೈಯಪ್ಪನಹಳ್ಳಿ | 22975883 | ಗೋವಿಂದರಾಜ ನಗರ | 23113057 |
| ಬಾಸ್ಕರ್ ಟೌನ್ | 9845144632 | ಅವಲಹಳ್ಳಿ | 22975782 |
| ಕೆ.ಜಿ. ಹಳ್ಳಿ | 9341326023 | ಪಂತರಪಾಳ್ಯ | 22975794 |
| ರಾಬರ್ಟ ಸನ್ ರಸ್ತೆ | 22975890 | ಬಾಪೂಜಿನಗರ | 26745179 |
| ಆಡುಗೋಡಿ | 22975870 | ಗಂಗೊಂಡನಹಳ್ಳಿ | 9480683898 |
| ಕೋರಮಂಗಲ | 22975871 | ಎಸ್.ಎಸ್.ಪಾಳ್ಯ | 22975780 |
| ತಾವರೆಕೆರೆ | 9880105993 | ಜೆ.ಪಿ ನಗರ | 9480683887 |
| ಕೋಡಿಹಳ್ಳಿ | 9449060504 | ವಿದ್ಯಾಪೀಠ | 22975776 |
| ಅಂಜನಪ್ಪ ಗಾರ್ಡನ್ | 26701567 | ಸಿ.ಟಿ. ಬೆಡ್ | 9886318433 |
| ಮತ್ತಿಕೆರೆ | 9480683805 | ಯಾರಬ್ ನಗರ | 22975777 |
| ಸುಲ್ತಾನ್ ಪಾಳ್ಯ | 23541901 | ಕೆ. ಎಸ್.ಲೇಔಟ್ | 22975779 |
| ಶಂಕರನಗರ | 948068391 | | |

| ನಗರ ಕುಟುಂಬ ಕಲ್ಯಾಣ ಕೇಂದ್ರಗಳು | ಫೋನ್ ನಂ | ನಗರ ಕುಟುಂಬ ಕಲ್ಯಾಣ ಕೇಂದ್ರಗಳು | ಫೋನ್ ನಂ |
|---|---|---|---|
| ಹಲಸೂರು | 22975876 | ಎನ್. ಆರ್. ಕಾಲೋನಿ | 22975768 |
| ಡಿ. ಜೆ ಹಳ್ಳಿ | 22975881 | ಜಯನಗರ | 22975771 |
| ಆಸ್ಟಿನ್ ಟೌನ್ | 22975868 | ಗೋರಿಪಾಳ್ಯ | 22975786 |
| ಶಾಂತಿನಗರ | 22975867 | ಆಜಾದ್ ನಗರ | 22975787 |
| ದಾಸಪ್ಪ | 22975684 | ರಾಜಾಜಿನಗರ | 22975666 |
| ಆರ್. ಸಿ. ಪುರ | 9480683792 | ಮಾಗಡಿ ರಸ್ತೆ | 22975789 |
| ಎಮ್. ಆರ್. ಪಾಳ್ಯ | 22975879 | ವೆಸ್ಟ್ ಆಫ್ ಕಾರ್ಡ್ ರಸ್ತೆ | 9480684138 |
| ಗಂಗಾನಗರ | 22975878 | ಟಿ. ಆರ್. ಮಿಲ್ | 9480683901 |
| ಮನವರ್ತ ಪೇಟೆ | 22975676 | ಕಾಮಾಕ್ಷಿ ಪಾಳ್ಯ | 9480683795 |
| ಪೊಬ್ಬತಿ | 22975673 | | |

# 5. ಸಂಪರ್ಕ ಕಛೇರಿಯ ವಿಳಾಸಗಳು:

➢ ಬಿ.ಬಿ.ಎಂ.ಪಿ ಆರೋಗ್ಯಾಧಿಕಾರಿಗಳ ವಿಳಾಸಗಳು:

| ಕ್ರಮ ಸಂಖ್ಯೆ | ಹೆಸರು ಮತ್ತು ಹುದ್ದೆ | ಕಛೇರಿ ವಿಳಾಸ | ದೂರವಾಣಿ |
|---|---|---|---|
| 01 | ಡಾ.ಎಲ್.ಟಿ.ಗಾಯತ್ರಿ ಮುಖ್ಯ ರೋಗ್ಯಾಧಿಕಾರಿಗಳು | ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಕೇಂದ್ರ ಕಛೇರಿ ಆವರಣ, ಎನ್.ಆರ್. ವೃತ್ತ.ಬೆಂಗಳೂರು–560002 | 22112019 |
| 02 | ಡಾ.ಎಸ್.ಬಿ.ನಾಗರಾಜ್ ಆರೋಗ್ಯಾಧಿಕಾರಿಗಳು | ಪೂರ್ವ ವಲಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ಮೆಯೋಹಾಲ್, ಬೆಂಗಳೂರು–560001 | 2975850/ 852 |
| 03 | ಆರೋಗ್ಯ ವೈದ್ಯಾಧಿಕಾರಿಗಳು | ಪಶ್ಚಿಮ ವಲಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಸಂಪಿಗೆ ರಸ್ತೆ, ಬಾಷ್ಯಂಪಾರ್ಕ್ ಶೇಷಾದ್ರಿಪುರಂ, ಸೌತ್ ಸೆಂಟ್ರಲ್ ರಸ್ತೆ ಬೆಂಗಳೂರು–560020 | 22975650 |
| 04 | ಆರೋಗ್ಯ ವೈದ್ಯಾಧಿಕಾರಿಗಳು | ದಕ್ಷಿಣ ವಲಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಎರಡನೇ ಮಹಡಿ, 9ನೇ ಮುಖ್ಯ ರಸ್ತೆ, 2 ನೇ ಬ್ಲಾಕ್.ಜಯನಗರ, ಬೆಂಗಳೂರು –560011 | 22975750 |
| 05 | ಡಾ.ಬಿ.ಎಂ.ಶಿವಸ್ವಾಮಿ ಆರೋಗ್ಯ ವೈದ್ಯಾಧಿಕಾರಿಗಳು | ದಾಸರಹಳ್ಳಿ ವಲಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ದಾಸರಹಳ್ಳಿ ವಲಯ, ಬೆಂಗಳೂರು ಬಿಬಿಎಂಪಿ, ದಾಸರಹಳ್ಳಿ ಬಾಗಲಗುಂಟೆ, ಬೆಂಗಳೂರು–73 | 22975904 |
| 06 | ಡಾ.ಮನೋಹರ್ ಆರೋಗ್ಯ ವೈದ್ಯಾಧಿಕಾರಿಗಳು | ರಾಜರಾಜೇಶ್ವರಿ ನಗರ ವಲಯ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ರಾಜರಾಜೇಶ್ವರಿ ನಗರ, ಮೈಸೂರು ರಸ್ತೆ ಬೆಂಗಳೂರು–560098 | 94801683928 286002089 |

| | | | |
|---|---|---|---|
| 07 | ಡಾ.ಬಸವರಾಜ್‌ಲಕ್ಷ್ಮಣ್ ಹುಡೇದ್<br>ಆರೋಗ್ಯ ವೈದ್ಯಾಧಿಕಾರಿಗಳು | ಯಲಹಂಕ ವಲಯ<br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ<br>ಅಮೃತಹಳ್ಳಿ ಮುಖ್ಯರಸ್ತೆ<br>ಬ್ಯಾಡರಾಯನಪುರ<br>ಸಹಾಕಾರ ನಗರ<br>ಬೆಂಗಳೂರು-92 | 23626443,<br>9480683383 |
| 08 | ಆರೋಗ್ಯಾಧಿಕಾರಿಗಳು | ಮಹದೇವಪುರ ವಲಯ,<br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ<br>4ನೇ. ಕ್ರಾಸ್,<br>ಆರ್.ಹೆಚ್.ಬಿ..ಕಾಲೋನಿ,<br>ಲಕ್ಷ್ಮೀಸಾಗರ ರಸ್ತೆಯ ಪಾಲಿಕೆ | 28510864 |
| 09 | ಆರೋಗ್ಯಾಧಿಕಾರಿಗಳು | ಬೊಮ್ಮನಹಳ್ಳಿ ವಲಯ<br>ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ<br>ಬಿ.ಬಿ.ಎಂ.ಪಿ. ಕಟ್ಟಡ,ಬೇಗೂರು ರಸ್ತೆ, ಬೆಂಗಳೂರು-56068 | 25736702 |

- **ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದ ವಿಳಾಸಗಳು:**

| ಕ್ರಮ ಸಂಖ್ಯೆ | ಹೆಸರು ಮತ್ತು ಹುದ್ದೆ | ಕಛೇರಿ ವಿಳಾಸ | ದೂರವಾಣಿ |
|---|---|---|---|
| 01 | ಪ್ರಧಾನ ಕಾರ್ಯದರ್ಶಿಗಳು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ<br>ರೂಂ.ನಂ.104, ಮೊದಲನೇ ಮಹಡಿ, ವಿಕಾಸ ಸೌಧ, ಬೆಂ-01 | 22255324<br>22034234 |
| 02. | ಆಯುಕ್ತರು | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯ<br>ಆನಂದರಾವ್ ಸರ್ಕಲ್, ಬೆಂ-01 | 2287439<br>22354085 |
| 03. | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳು<br>(ಬೆಂಗಳೂರು ನಗರ ಜಿಲ್ಲೆ) | ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಕಛೇರಿ<br>ಸಾಂಕ್ರಾಮಿಕ ರೋಗಗಳ ಆಸ್ಪತ್ರೆ ಆವರಣ, ಹಳೇ ಮದ್ರಾಸ್ ರಸ್ತೆ, ಬೆಂಗಳೂರು-38 | 9449843037,<br>25566844<br>22717447<br>25519267 |

civic
BANGALORE
CITIZENS VOLUNTARY INITIATIVE FOR THE C

## ಸಿವಿಕ್ ಬೆಂಗಳೂರು ಕುರಿತು...

ಸಿವಿಕ್ ಸ್ಥಾಪನೆಗೊಂಡಿದ್ದು 1992ರಲ್ಲಿ. ಬೆಂಗಳೂರಿನ ಅಭಿವೃದ್ಧಿ ಏಕೆ ದಾರಿ ತಪ್ಪುತ್ತಿದೆ, ಅದನ್ನು ಸರಿದಾರಿಗೆ ತರಲು ಏನು ಮಾಡಬೇಕು? ಎಂಬ ಪ್ರಶ್ನೆಗೆ ಉತ್ತರ ಹುಡುಕುತ್ತಿದ್ದ ವಿವಿಧ ಹಿನ್ನೆಲೆಯ ಚಿಂತನಶೀಲ ವ್ಯಕ್ತಿಗಳು ಕ್ರಮವಾಗಿ ಸಭೆ ಸೇರಿ, ಚರ್ಚಿಸಿ, ಮುಂದಡಿಯಿಟ್ಟ ಫಲವಾಗಿ ಮೂಡಿದ್ದು "ಸಿವಿಕ್".

ನಗರದ ಯೋಜನೆ ಮತ್ತು ನಿರ್ವಹಣೆಗಳು ಪಾರದರ್ಶಕವಾಗಿ ಮತ್ತು ಜವಾಬ್ದಾರಿಯುತವಾಗಿ ಹೇಗೆ ನಡೆಯಬೇಕೆಂಬ ವಿಚಾರಕ್ಕೆ ಸಿವಿಕ್ ಪ್ರಯತ್ನ ನಡೆಸುತ್ತಾ ಬಂದಿದೆ. ಸಂವಿಧಾನದ 74ನೇ ತಿದ್ದುಪಡಿ ಹಾಗೂ ಮಾಹಿತಿ ಹಕ್ಕು ಕಾಯ್ದೆ 2005ನ್ನು ಉಪಯೋಗಿಸಿಕೊಂಡು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದೆ. ನಗರಾಡಳಿತದಲ್ಲಿ ನಾಗರೀಕರು ಹೆಚ್ಚು ಹೆಚ್ಚಾಗಿ ಪಾತ್ರ ವಹಿಸಬೇಕೆಂದು ಜನವೇದಿಕೆಗಳನ್ನು ರಚಿಸಿ, ಅವುಗಳ ಮೂಲಕ ಕೆಲಸ ಮಾಡುತ್ತಿದೆ.

ನಗರದ ಬಡವರೊಡನೆ ಅವರಿಗೆ ತಲುಪಬೇಕಾದ ನೀರು, ಆಹಾರ, ಶಿಕ್ಷಣ, ಆರೋಗ್ಯ ಮತ್ತು ಜೀವನೋಪಾಯಗಳಂತಹ ಕಾರ್ಯಕ್ರಮಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಮೂಡಿಬಂದ ಅನುಭವಗಳನ್ನು ನಗರದ ಇತರ ಸಂಸ್ಥೆಗಳೊಂದಿಗೆ ಹಂಚಿಕೊಂಡು ಅದರ ಫಲಗಳು ಸಾಕಷ್ಟು ಪಸರಿಸಲು ಪ್ರೇರೇಪಿಸುತ್ತಿದೆ. ವಾರ್ಡ್ ಮಟ್ಟದಲ್ಲಿ ಸಮಾಜದ ಎಲ್ಲಾ ಸ್ತರಗಳನ್ನು ಸಂಘಟಿಸಿ, ವೇದಿಕೆಗಳನ್ನು ಸೃಷ್ಟಿಸಿ, ವಾರ್ಡ್‌ನ ಸರ್ವತೋಮುಖ ಬೆಳವಣಿಗೆಗೆ ಕಾರ್ಯತಂತ್ರವನ್ನು ರೂಪಿಸುವ ಕ್ರಮವನ್ನು ಜಾರಿಗೆ ತರಲು ಪ್ರಯತ್ನಿಸುತ್ತಿದೆ. ಈ ಎಲ್ಲಾ ಕಾರ್ಯಕ್ರಮಗಳಲ್ಲಿ ಜನರ ಪಾಲ್ಗೊಳ್ಳುವಿಕೆಗೆ ಮತ್ತು ಕುಂದುಕೊರತೆಗಳ ಸಮರ್ಪಕ ವಿಧಾನಗಳಿಗೆ ಪ್ರಾಮುಖ್ಯತೆ ನೀಡಿ ಅವುಗಳ ವಿನ್ಯಾಸಕ್ಕೆ ರೂಪುಕೊಡುವ ಪ್ರಯತ್ನದಲ್ಲಿ ತೊಡಗಿದೆ.



ಹೆಚ್ಚಿನ ಮಾಹಿತಿಗಾಗಿ ಸಂಪರ್ಕಿಸಿ

**ಸಿವಿಕ್ ಬೆಂಗಳೂರು**

ನಂ.6, 35/23, ಕಸ್ತೂರಿ ಅಪಾರ್ಟ್‌ಮೆಂಟ್ಸ್,
ಲ್ಯಾಂಗ್‌ಫೋರ್ಡ್ ರಸ್ತೆ ತಿರುವು,
ಶಾಂತಿನಗರ, ಬೆಂಗಳೂರು-560 025
ದೂರವಾಣಿ: 080 22110584/41144126
E mail: info@civicspace.in Web: www.civicspace.in